


# ರುಕ್ಮಿಣಿ

ಅನುವಾದಕರು :
ಶ್ರೀ ಪಂ. ವೆಂಕೋಬಾಚಾರ್ಯರು
ಬಿ. ಎ. ಬಿ.



ಉಬ್ಬಳ್ಳಿ 'ಕುಸುಮ-೧

ವರುಷ ೩




( ಶ್ರೀ ಮುನಿಮಾಣಿಕ್ಯಂ ನರಸಿಂಹರಾಯರು [illegible] )



ಅನುವಾದಕರು :

ಶ್ರೀ ಹಂ. ವೆಂಕೋಬಾಚಾರ್ಯ [illegible]



ಆನಂದ ಗ್ರಂಥಮಾಲಾ, ಹುಬ್ಬಳ್ಳಿ.

ಜಾನೆವರಿ ೧೯೫೩

ಸಾದಾ ಪ್ರತಿ : ೧-೮-೦

ಉತ್ತಮ ಪ್ರತಿ : ೨-೦-೦

ಸಲಹೆಗಾರರು

ಶ್ರೀ. ಎಸ್. ಆರ್. ಮಳಗಿ, ಎಂ. ಎ. ಬಿ. ಟಿ

ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ. ಬಿ. ಟಿ.

ಶ್ರೀ. ಆರ್. ವಿ. ಕುಲಕರ್ಣಿ, ಎಂ. ಎ.

ಶ್ರೀ. ದೇಸಾಯಿ ದತ್ತಮೂರ್ತಿ

ಸಂಪಾದಕರು

**ಶ್ರೀ ಪಂ. ವೆಂಕೋಬಾಚಾರ್ಯ** ಬಿ. ಎ. ಬಿ. ಟಿ.



ಮುದ್ರಕರು

**ಕೆ. ಜಿ. ತಾಪಸ,** ಬಿ. ಎ.

ಒಡೆಯರು: ಸುಧಾ ಪ್ರೆಸ್, ಹುಬ್ಬಳ್ಳಿ.

ಪ್ರಕಾಶಕರು

**ಪಿ. ವಿ. ಆಚಾರ್ಯ** & ಕಂ.

೬೮೬೦ ಗವಳೀಗಲ್ಲಿ, ಹುಬ್ಬಳ್ಳಿ

# ಪರಿವಿಡಿ







## ಇದೇ ವರುಷ ಮುಂದೆ ಬರಲಿರುವ ಪುಸ್ತಕಗಳು



| | |
|---|---|
| ೧. ಮೋಪಾಸಾನ ಓಲೆಗಳು ಮತ್ತು ಕತೆಗಳು | ಶ್ರೀ ಹಂ. ವೆಂಕೋಬಾಚಾರ್ಯ |
| ೨. ಶಾಫೋ ( ಕಾದಂಬರಿ ) | ಆಲ್ಫಾನ್ಸೋ ಡಾಡೇ |
| ೩. ಒಂದು ಕಾದಂಬರಿ | ಪ್ರೊ. ದ. ರಾ. ಬೇಂದ್ರೆ ಎಂ. ಎ. |

# ಅನುವಾದಕನ ಮಾತು

ಆಂಧ್ರ ಪ್ರಖ್ಯಾತ ಸಾಹಿತಿಯಾದ ಶ್ರೀ ಮುನಿಮಾಣಿಕ್ಯಂ ನರಸಿಂಹ ರಾಯರು ಬಿ. ಎ ಎಲ್. ಟಿ. ಇವರ ಪರಿಚಯ ಕನ್ನಡಿಗರಿಗಾಗಲೇ ಆಗಿದೆ. 'ರುಕ್ಮಿಣಿ' ಎಂಬ ಕಿರುಕಾದಂಬರಿಯಲ್ಲಿ ಅವರು ತಮ್ಮ ಹಿರಿಯ ಮಗಳ ಸಾವಿನ ದುರಂತ ಚಿತ್ರವನ್ನು ಕಂಡ ಅನೇಕ ವ್ಯಕ್ತಿಗಳ ಮಾತಿನಲ್ಲಿ ಚಿತ್ರಿಸಿರು ವರು. ಇದೊಂದು ಉತ್ತಮ ಕೃತಿಯೆಂದು ಅವರೇ ಸೂಚಿಸಿದುದರಿಂದಲೂ ನನಗೂ ಈ ಬಗೆಯ ನಿರೂಪಣೆ ಕನ್ನಡ ಕಿರು-ಕಾದಂಬರಿ ಪ್ರಪಂಚಕ್ಕೆ ಹೊಸ ತೆನಿಸಿದುದರಿಂದಲೂ ಇದನ್ನು ಕನ್ನಡಿಸಿದ್ದೇನೆ. ಇದರ ಜತೆಗೆ ಕಾಂತಂಳ ಸಂಸಾರದ ಕೆಲವು ಕತೆಗಳನ್ನೂ ಜೋಡಿಸಿದ್ದೇನೆ. ಈ ಹೊತ್ತಿಗೆ ಕನ್ನಡಿ ಗರಿಗೆ ರುಚಿಸುವುದೆಂದು ನನ್ನ ಭಾವನೆ. ನನ್ನ ಪರಮ ಮಿತ್ರರಾದ ಶ್ರೀ ಮುನಿ ಮಾಣಿಕ್ಯಂರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

೧-೧-೫೩ **ಪಂ. ವೆಂಕೋಬಾಚಾರ್ಯ**



# ಪ್ರಕಾಶಕರ ನುಡಿ

ಶ್ರೀ ಪಂ. ವೆಂಕೋಬಾಚಾರ್ಯರು ಮತ್ತು ಇತರ ನುರಿತ ಸಲಹೆಗಾರರ ನೆರವಿನಿಂದ ಹೊರಟ ಆನಂದ ಗ್ರಂಥ ಮಾಲೆಯು ಕೆಲವು ಅಡಚಣಿಗಳನ್ನು ಅನುಭವಿಸಿ ತನ್ನ ಮೂರನೇ ವರುಷದಲ್ಲಿ ಕಾಲಿಡುತ್ತಲಿದೆ. ಕನ್ನಡ ಅನು ವಾದ ಸಾಹಿತ್ಯದ ಸಂಪತ್ತನ್ನು ಹೆಚ್ಚಿಸಲು ಈ ಮಾಲೆಯು ಕನ್ನಡ ಜನತೆ ಗಳಿಂದ ಆದರ ಆಶ್ರಯ ಸಹಾನುಭೂತಿಗಳನ್ನು ಆಶಿಸುತ್ತದೆ. ಈ ಮಾಲೆಗೆ ಸತತ ನೆರವನ್ನು ನೀಡಿದ ಸಲಹೆಗಾರ ಮಿತ್ರರಿಗೂ, ಮತ್ತು ಕಾಂತಂ ಕತೆ ಗಳನ್ನು ತಮ್ಮ "ಉಷಾ" ಪತ್ರಿಕೆಯಲ್ಲಿ ಪ್ರಕಟಿಸಿದ ಶ್ರೀ ನಂಜಪ್ಪನವರಿಗೂ, ಉದಾರ ಹೃದಯದ ಕನ್ನಡ ಓದುಗರಿಗೂ, ಮತ್ತು ಸುಧಾ ಪ್ರೆಸ್ಸಿನ ಒಡೆಯರಿಗೂ ನಮ್ಮ ವಂದನೆಗಳು. ಈ ಮಾಲೆಯಲ್ಲಿ ತಮ್ಮ ಕೃತಿಯನ್ನು ಪೋಣಿಸಲು ಒಪ್ಪಿಗೆಯನ್ನಿತ್ತ ಶ್ರೀ ಮುನಿಮಾಣಿಕ್ಯಂರಿಗೆ ನಾವು ಋಣಿಗಳು.

ಹುಬ್ಬಳ್ಳಿ
೧-೧-೫೩

ಸಂಚಾಲಕರು
**ಆನಂದ ಗ್ರಂಥ ಮಾಲೆ.**

[೧]

# ರುಕ್ಮಿಣಿ

*          *

( ಒಂದು ಕಿರು ಕಾದಂಬರಿ )

ಅಂದು ಆಶ್ವೀಜ ಬಹುಳ ಅಮಾವಾಸ್ಯೆ; ಹೊರಗೆ ಕಗ್ಗತ್ತಲು. ಸುಣಸಿ ಪಾಲಿಕೇ ದೀಪಗಳು ಅಲ್ಲಲ್ಲಿ ಮಿನುಗುತ್ತಿದ್ದುವು. ಥೋಂಯೆಂದು ಬಿರುಗಾಳಿ ಬೀಸುತ್ತಿತ್ತು. ರಾತ್ರಿ ಎಂಟರ ಸಮಯ. ಅಂದು ಸಂಜೆ ನಾವು ಬೇಗ ಊಟ ಮುಗಿಸಿ ಮನೆಯ ದೊಡ್ಡ ಹಾಲಿನಲ್ಲಿ ಕುಳಿತಿದ್ದೆವು. ನನ್ನ ಹತ್ತಿರ ಮಗಳು ಸುಶೀಲೆ, ಅವಳ ಪಕ್ಕದಲ್ಲಿ ರಾಧಾಕೃಷ್ಣ, ಶಾಸ್ತ್ರಿ. (ಇವರು ನನ್ನ ಗಂಡುಮಕ್ಕಳು) ಕುಳಿತಿದ್ದಾರೆ. ಕೋಣೆಯ ಹೊಸ್ತಿಲಿನ ಹತ್ತಿರ ನನ್ನ ಚಿಕ್ಕಮ್ಮ ಕುಳಿತಿದ್ದಾಳೆ. ಅವರ ಪಕ್ಕದಲ್ಲಿ ಪಂಕಜಮ್ಮ ಕುಳಿತಿದ್ದಾರೆ. ಇವರನ್ನು ನನ್ನ ಚಿಕ್ಕಮ್ಮ ಸಲುಗೆಯಿಂದ ಅತ್ತೆಯೆಂದು ಕರೆಯುತ್ತಿದ್ದರು. ಸ್ವಲ್ಪ ದೂರದಲ್ಲಿ ಡಾಕ್ಟರ್ ಚಲಪತಿರಾವ್, ನನ್ನ ಪ್ರಾಣ-ಸ್ನೇಹಿತನ ಸತ್ಯಂ, ಮತ್ತು ಇತರ ಒಬ್ಬಿಬ್ಬರು ಮಿತ್ರರೂ ಕುಳಿತಿದ್ದರು. ನಮ್ಮೆಲ್ಲರ ಎದುರಿನಲ್ಲಿ ರುಕ್ಮಿಣಿಯ ಫೋಟೋ ಇಡಲ್ಪಟ್ಟಿತ್ತು. ಅವರ ಪಕ್ಕದಲ್ಲಿಯೇ ಅವಳ ಪತಿಯಾದ ಕಾಂತಂಳ ಫೋಟೋ ಸಹಾ ಇರಿಸಲ್ಪಟ್ಟಿತ್ತು. ಎರಡೂ ಫೋಟೋಗಳನ್ನು ಹೂಗಳಿಂದ ಅಲಂಕರಿಸಲಾಗಿತ್ತು. ಅವುಗಳೆದುರಿನಲ್ಲಿ ಎರಡು ತುಪ್ಪದ ದೀಪಗಳುರಿಯುತ್ತಿದ್ದವು. ಆಗ ಸುಶೀಲ "ಇನ್ನೇನು ಹೇಳಪ್ಪ, 'ರುಕ್ಮಕ್ಕ'ಳ ಕತೆಯನ್ನು" ಎಂದು ಕೇಳಿಕೊಂಡಳು. ನಾನು ಪ್ರಾರಂಭಿಸಿದೆ

........ತಾಯಿಯನ್ನು ಕಳೆದುಕೊಂಡ ನಮ್ಮ ರುಕ್ಮಿಣಿಯೇ ಮನೆಯಲ್ಲಿ ಹಿರಿಯ ಮುತ್ತೈದೆ. ಅಡುಗೆಯೊಂದು ಉಳಿದು ಇತರ ಕೆಲಸಗಳೆಲ್ಲವನ್ನು ಅವಳೇ ನೋಡಿಕೊಳ್ಳುತ್ತಿದ್ದಳು. ಹಾಲಿನವರಿಂದ ಹಾಲನ್ನು ಪಡೆಯುವದು, ಅಗಸರವನು ತಂದ ಅರಿವೆಗಳನ್ನು ನೋಡಿಕೊಳ್ಳುವದು, ಮಡಿಸು

ತಿಕ್ಕುವವಳೆಂದ ಸೆರಿಯಾಗಿ ಕೆಲಸ ಕೈಕೊಳ್ಳುವುದೂ ಅವಳದೇ ಆಗಿತ್ತು. ಮನೆಯಲ್ಲಿ ಏನು ಬೇಕಾದರೂ ರುಕ್ಮಿಣಿಯನ್ನು ಕೇಳಬೇಕು. ಸಣ್ಣ ಮಗುವನ್ನೆಬ್ಬಿಸಿ ಅವನಿಗೆ ಮುಖತೊಳೆದು ಅರಿವೆಯನ್ನು ಹಾಕಿ ಶಾಲೆಗೆ ಕಳಿಸುವವಳು ಅವಳೇ; ರಾಧಾಬಾಬುವಿನ ಅರಿವೆ ಕಾಣದಾದರೆ ಹುಡುಕಿ ಕೊಡುವವಳು ಅವಳೇ; ಶಾಸ್ತ್ರಿಯ ಗಣಿತಪುಸ್ತಕ ಕಾಣದಾದರೆ ಒದಗಿಸುವ ಕೆಲಸವೂ ಅವಳದೇ. ಇವುಗಳ ನಡುವೆ ಬಿಡುವು ದೊರೆತಾಗ ನನ್ನ ಚಿಕ್ಕಮ್ಮನಿಗೆ ಅಡುಗೆಯ ಮೇಲಿನ ಕೆಲಸದಲ್ಲಿ ನೆರವಾಗುವವಳೂ ರುಕ್ಮಿಣಿಯೇ. ಇಷ್ಟಾದರೂ ತನ್ನ ಓದನ್ನು ಮಾತ್ರ ಅವಳು ಅಲಕ್ಷಿಸಲಿಲ್ಲ.

"ಏನಮ್ಮಾ ರುಕ್ಮಿಣಿ ಈ ಅರಿವೆಗಳು ಹೀಗೇ ಬಿದ್ದಿವೆ"ಯೆಂದು ನಾನು ಒಟಗುಟ್ಟಿದರೆ ನಗುನಗುತ್ತ ಓಡಿಬಂದು ಅವುಗಳನ್ನು ಎತ್ತಿಡುವಳು. "ನನ್ನ ಪೇನಾ ಎಲ್ಲಿದೆಯಮ್ಮಾ" ಎಂದು ಕೂಗಿಕೊಂಡರೆ ಅದನ್ನು ಹುಡುಕಿ ಕೊಡುವವಳೂ ಅವಳೇ. ನನ್ನ ಜತೆಗೆ ಊಟಕ್ಕೆ ಕುಳಿತವಳು ನನಗಿಂತಲೂ ಮುಂಚಿತವಾಗಿಯೇ ಊಟ ಮುಗಿಸಿ ಎದ್ದುಹೋಗಿ, ಅಡಕೆ ಎಲೆಗಳನ್ನು ನನಗೆ ಕೊಟ್ಟು ಮತ್ತೇನಾದರೂ ಬೇಕಾದರೆ ಹುಡುಕಿಕೊಟ್ಟು, ನನ್ನನ್ನು ಶಾಲೆಗೆ ಕಳುಹಿಸಿ, ಆನಂತರ ತಾನು ಮನೆಗೆ ಹೋಗುತ್ತಿದ್ದಳು.

ರುಕ್ಮಿಣಿ ದಿನವೂ ನನಗಿಂತಲೂ ಮುಂಚಿತವಾಗಿಯೇ ಏಳುತ್ತಿದ್ದಳು. ಸ್ನಾನಾದಿಗಳನ್ನು ಬೇಗ ಮುಗಿಯಿಸಿ ತಲೆಬಾಚಿಕೊಂಡು ಹೂಮುಡಿಯುತ್ತಿದ್ದಳು. ಅವಳ ಕಪ್ಪುಕೂದಲ ರಾಶಿಯಲ್ಲಿ ಆ ಮಂದಾರ ಹೂ ಬಲು ಅಂದವಾಗಿ ಕಾಣಿಸುತ್ತಿತ್ತು.

ಇದನ್ನು ಕಂಡು ನನಗೆ ಬಹು ಆನಂದವಾಗುತ್ತಿತ್ತು. ಅವಳ ತಲೆಯು ಆಕಾರ ದೊಡ್ಡದು, ಅವಳದು ನೀಳವಾದ ಮೂಗು, ಅವಳ ಅದೃಷ್ಟವೆಲ್ಲವೂ ಕಣ್ಣಲ್ಲಿಯೇ ಇದೆಯೆಂದು ಎಲ್ಲರ ಅಭಿಪ್ರಾಯ. ನಕ್ಕರೆ ಮುತ್ತುಗಳು ಉದುರುವಂತೆ ಇತ್ತು. ಸ್ವರ ಎತ್ತಿ ಅವಳೊಂದು ತ್ಯಾಗರಾಜ ಕೀರ್ತನೆ ಹಾಡಿದಳೆಂದರೆ ನಾಲ್ಕಾರು ವೀಣೆಗಳು ಒಂದೇ ಶ್ರುತಿಯಲ್ಲಿ ನುಡಿಯುವಂತಿರುತ್ತಿತ್ತು.

ಮನೆಯಲ್ಲಿ ಮಕ್ಕಳಿದ್ದಾರೆ. ಮನೆಯ ವಿಚಾರ ನೋಡಿಕೊಳ್ಳಲು ರುಕ್ಮಿಣಿ ಇದ್ದಾಳೆ. ಇತರ ಅಡುಗೆ ಮುಂತಾದುವನ್ನು ಮಾಡುವುದಕ್ಕೆ ಚಿಕ್ಕಮ್ಮ ಇದ್ದಾಳೆ. ಹೀಗೆ ಸಂಸಾರ ಸುಖವಾಗಿ ಸಾಗುತ್ತಿರಲು ನನ್ನವಳನ್ನು ಕಳೆದುಕೊಂಡ ದುಃಖವು ಕೊಂಚ ಕೊಂಚವಾಗಿ ಕಡಿಮೆಯಾಗತೊಡಗಿತು.

ರುಕ್ಮಿಣಿ ದೊಡ್ಡವಳಾದ ನಂತರ, ಗಂಡನ ಮನೆಗೆ ಹೋದರೆ ಹೇಗೆಂಬ ಪ್ರಶ್ನೆ ನನ್ನನ್ನು ವೇಧಿಸತೊಡಗಿತು. ಅವಳ ಗಂಡ ಇನ್ನೂ ಮೆಟ್ರಿಕ್ ಕ್ಲಾಸಿನಲ್ಲೇ ಓದುತ್ತಿದ್ದ. ಬಿ. ಎ. ಮುಗಿಯುವವರೆಗೆ ನಮ್ಮ ಮನೆಯಲ್ಲೇ ಇರಿಸಿಕೊಂಡರೆ ತಪ್ಪೇನೆಂದು ಯೋಚಿಸಿದೆ. ಹೀಗೆ ಮಾಡಿದರೆ ರುಕ್ಮಿಣಿಯ ಓದೂ ಮುಂದರಿಯುವುದು. ಅಳಿಯ-ಮಗಳೂ ಇಬ್ಬರೂ ಹತ್ತಿರವೇ, ನನ್ನ ಕಣ್ಣೆದುರಿನಲ್ಲೇ; ಇರುವ ಅನುಕೂಲ; ಅಗಲಿಕೆಯ ದುಃಖವೂ ಇರಲಾರದೆಂದು ನನ್ನ ಮನಸ್ಸು ಒಗ್ಗಿತು. ಇಷ್ಟೆಲ್ಲ ಮುಗಿಯಬೇಕಾದರೆ ನಾಲ್ಕು ವರುಷಗಳಾಗುವವು. ಹುಡುಗರು ದೊಡ್ಡವರಾಗುವರು; ಅವರನ್ನು ಜೋಪಾನ ಮಾಡುವ ತೊಂದರೆಯೂ ದೂರಾಗುವದೆಂದು ನಾನು ಸಂತೋಷಹೊಂದಿದೆ.

ರಾತ್ರಿ ತಡಮಾಡಿ ಮನೆಗೆ ಬಂದರೂ ರುಕ್ಮಿಣಿ ನನಗಾಗಿ ಕಾದು ನಿಂತಿರುತ್ತಿದ್ದಳು. "ಮಲಗಿ ನಿದ್ದೆಮಾಡಬಾರದಾಗಿತ್ತೆ, ತಾಯೀ. ಹೀಗೆ ನಿದ್ದೆಗೆಟ್ಟರೆ... ಕಾದರೆ ನಿನ್ನ ವ್ಯೆಗತಿ ಏನಮ್ಮಾ?" ಎಂದು ನಾನು ಕೇಳಿದರೆ, "ಇರಲಿ ಬಿಡಣ್ಣಾ, ನನಗೇನಾಗುತ್ತದೆ. ನಾವು ಇನ್ನೂ ಚಿಕ್ಕವರು, ನಮಗೇನು?" ಎಂದು ಹೇಳುತ್ತಿದ್ದಳು. ಊಟ ಮುಗಿಸಿದ ಮೇಲೆ ನನ್ನ ಮನಶ್ಶಾಂತಿಗೆಂದು ಒಂದು ತ್ಯಾಗರಾಜರ ಕೃತಿ ಹಾಡಿದಳೆಂದರೆ ನನಗೆ ಬೇಗ ನಿದ್ದೆ ಬರುತ್ತಿತ್ತು.

ರುಕ್ಮಿಣಿಯ ತಾಯಿ ಬದುಕಿದ್ದರೆ, ನಮ್ಮ ಮನೆಯ ಈ ಶಾಂತಮಯ ಶೃಂಗಾರ ವಾತಾವರಣವನ್ನು ನೋಡಿ ಬಹಳ ಒಗ್ಗುತ್ತಿದ್ದಳು. ಅವಳು ಆನಂದಪಡುವುದನ್ನು ನೋಡುವ ಭಾಗ್ಯ ನನಗಿಲ್ಲವಲ್ಲವೆಂದು ನಾನು ಅನೇಕ ಸಲ ನಿಟ್ಟುಸಿರನ್ನು ಬಿಡುತ್ತಿದ್ದೆ.

ಅವಳು ಬದುಕಿದ್ದರೆ ನಮ್ಮ ಮನೆಗೆ ಈ ಪರಿಸ್ಥಿತಿ ಏಕೆ ಬರುತ್ತಿತ್ತು? ಅವಳೇ ಮಾಡಬೇಕಾದ ಸುಶೀಲಳ ಮದುವೆಯನ್ನು ನೋಡದವನಾದ ಸತ್ಯಂ

ಮಾಡಬೇಕಾದ ಆವಶ್ಯಕವೇನಿತ್ತು? "ಅವಳ ಮದುವೆಗಲ್ಲವೇ ಇಂದು ರುಕ್ಮಿಣಿ ಹೋದುದು? ರುಕ್ಮಿಣಿಯನ್ನು ಕಳಿಸಬೇಡವೆಂದು ನಾನು ಬಹಳ ಹೇಳಿದೆ. ಅವಸರಪಟ್ಟು ನಿಮ್ಮ ತಂದೆಯೇ ಅವಳನ್ನು ಅಲ್ಲಿಗೆ ಕರೆದುಕೊಂಡು ಹೋದ" ಎಂದು ಚಿಕ್ಕಮ್ಮ ಕೊಸರಿಕೊಂಡು ಹೇಳಿದ ಮಾತಿಗೆ, "ನೀನು ಬೇಡವೆಂದರೂ ಏತಕ್ಕೆ ಮತ್ತೆ ಸುಶೀಲಳ ಮದುವೆ ನಡೆಸಿದರು?" ಎಂದು ಶಾಸ್ತ್ರಿ ಕೇಳಿದ ಆ ಮಾತಿಗೆ ಉತ್ತರವಾಗಿ ಚಿಕ್ಕಮ್ಮ ಹೀಗೆ ಹೇಳಿದಳು....

*   *   *

... ....ನಿಮ್ಮ ತಾಯಿ ತೀರಿಕೊಂಡು ಆ ಮಾತಿಗೆ ಆರು ತಿಂಗಳಾಗಿತ್ತು. ಒಂದು ದಿನ ನಿಮ್ಮನ್ನು ನೋಡಿಕೊಂಡು ಹೋಗೋಣವೆಂದು ನಿಮ್ಮ ಮಾವ ಸತ್ಯಂ ಈ ಊರಿಗೆ ಬಂದು ಇಲ್ಲಿಯ ಪರಿಸ್ಥಿತಿ ನೋಡಿ ಬಹಳ ನೊಂದು ಕೊಂಡ. ಯಜಮಾನಿ ಇಲ್ಲದ ಈ ಮನೆ ಆತನಿಗೆ ಅಧಿಕವಾದ ದುಃಖವನ್ನು ತಂದೊಡ್ಡಿತು. ಮನೆಗೆ ಬಂದೊಡನೇ ನಗುಮುಖದಿಂದ ತನ್ನನ್ನು ಬರ ಮಾಡಿಕೊಂಡು ಸಂತೋಷದ ನಾಲ್ಕು ಮಾತುಗಳನ್ನು ಆಡಿ ಮನೆಯ ಜ್ಯೋತಿಯಾಗಿ ಬೆಳಗುತ್ತಿದ್ದ ಆ ಕಾಂತಂಳ ನೆನಪು ಬಂತು. ಅವನು ಈ ಅನಾಥಮಕ್ಕಳನ್ನು ತಬ್ಬಿಕೊಂಡು ಹೆಣ್ಣಿನಂತೆ ಅತ್ತುಬಿಟ್ಟ. ಆವನ ಗೋಳು ಹೇಳತೀರದು.

ಉಕ್ಕಿಬರುವ ದುಃಖವನ್ನು ನುಂಗಿಕೊಂಡು ಆತನು ನಿಮ್ಮ ತಂದೆ ಯೊಂದಿಗೆ "ಭಾವಾ, ಸುಶೀಲೆಗೆ ಈ ತಿಂಗಳು ಮದುವೆ ಮಾಡಿಬಿಡುವ" ಎಂದು ಹೇಳಿದ.

"ಈಗೇಕೆ ಅವಸರ? ಅವಳಿಗಿನ್ನೂ ಹತ್ತನೇ ವರುಷ ನಡೆಯುತ್ತಿದೆ. ಇಷ್ಟು ಸಣ್ಣವಯಸ್ಸಿನಲ್ಲಿಯೇ ಮದುವೆ ಮಾಡಿ ಅವಳಿಗೇಕೆ ಇಲ್ಲದ ತೊಂದರೆ ತಂದಿಡಬೇಕು?" ಎಂದು ನಿಮ್ಮ ತಂದೆ ಸೂಚಿಸಿದ.

"ಅದೇನು ಮಾತು ಭಾವಾ? ಒಳ್ಳೇ ಮನೆಯವರ ಬೀಗತನ ಒದಗಿ ಬಂದಾಗ ಮದುವೆ ಮಾಡದಿದ್ದರೆ, ಮತ್ತೆ ನಾವು ಪ್ರಯತ್ನಪಟ್ಟರೆ ಸಿಗು ವುದೇ? ನಾನು ಈಗ ಆರಿಸಿದ ವರನು ಮತ್ತಾರೂ ಅಲ್ಲ; ನನ್ನ ಹೆಂಡ ತಿಯ ಸೋದರಮಾವನ ಮಗನೇ. ನಿಮ್ಮ ಮುಂದೆ ಈ ಮಾತು ಪ್ರಸ್ತಾಪಿ

ಸುವ ಮೊದಲು ನಾನು ಬಹಳ ಯೋಚಿಸಿದೆ. ಅಲ್ಲ, ಈಗಲ್ಲದಿದ್ದರೂ ಇನ್ನೆರಡು ವರುಷಗಳ ನಂತರವಾದರೂ ಇದೇ ವರನಿಗೆ ಇವಳನ್ನು ಕೊಡಬೇಕೇ? ಇದಲ್ಲದೆ ನನ್ನ ಸೋದರತ್ತೆಯ ಹೆಂಡತಿಯೆಂದು ನನ್ನವಳೂ ಪ್ರೀತಿಸುವಳು; ಅಣ್ಣನ ಮಗಳೆಂದು ನನಗೂ ಮಮತೆ. ಹೀಗಾಗಿ ಈ ಸಂಬಂಧ ಅನುಕೂಲವಾದುದೆಂದು ನನ್ನ ಊಹೆ, ಇದರ ಮೇಲೆ ನಿನ್ನ ಇಷ್ಟ." ಎಂದು ಸತ್ಯಂ ಹೇಳಿದ ಮಾತಿಗೆ ನಿಮ್ಮ ತಂದೆಗೆ ಎದುರು ಹೇಳುವ ಮನಸ್ಸಿರಲಿಲ್ಲ. ಸತ್ಯಂಯೆಂದರೆ ನಿಮ್ಮ ತಂದೆಗೆ ಬಹಳ ವಿಶ್ವಾಸ ಮತ್ತು ಪ್ರೇಮ. ಸಣ್ಣವನಿದ್ದಾಗಿನಿಂದಲೂ ಆತ ನಿಮ್ಮ ಮನೆಯಲ್ಲೇ ಬೆಳೆದು ದೊಡ್ಡವನಾದ. ಅವನೆಂದರೆ ದೊಡ್ಡಮಗನಲ್ಲಿರುವಷ್ಟು ಮಮತೆ. ಒಳ್ಳೇ ಮನೆಯ ಹೆಣ್ಣನ್ನು ತಂದು ತಂದೆ ತಾಯಿ ಇಲ್ಲದ ಅವನಿಗೆ ಸಂಸಾರವೊಂದನ್ನು ಹೂಡಿಸಿ ಅವನು ಸುಖದಿಂದ ಇರುವಂತೆ ಮಾಡಿದ್ದ; ಅವನ ಮಾತನ್ನು ಸುಲಭವಾಗಿ ಅಲ್ಲಗಳೆಯುವ ಮನಸ್ಸಿರಲಿಲ್ಲ ನಿಮ್ಮ ತಂದೆಗೆ. "ಇಲ್ಲಿ ನೋಡು ಸತ್ಯಂ ಸುಶೀಲೆ ನಿನ್ನ ಹತ್ತಿರವೇ ಬೆಳೆದಿದ್ದಾಳೆ. ಅವಳಲ್ಲಿ ನಿನಗಿರುವ ಪ್ರೀತಿ, ಆದರ ನಾನು ಬಲ್ಲೆ. ಅವಳ ಮದುವೆಯ ವಿಷಯ ನೀನೆ ಪ್ರಸ್ತಾಪಿಸಿ ಮಾಡುತ್ತೀಯೆಂದ ಮೇಲೆ ನಾನೇಕೆ ಬೇಡವೆನ್ನಲಿ? ಆದರೆ ಇಷ್ಟು ಬೇಗ ಬೇಡವೆಂದು ಮಾತ್ರ ಹೇಳಿದೆ. ನೀನು ಆರಿಸಿದ ಸಂಬಂಧವು ನನಗೆ ಒಪ್ಪಿಗೆ. ಇನ್ನೇನು?" ಎಂದು ನಿಮ್ಮ ತಂದೆ ಒಪ್ಪಿದ.

ಈ ಮಾತಿಗೆ ಸತ್ಯಂ ಕೊಂಚ ಸಮಯ ಸುಮ್ಮನಿದ್ದು, ಸುಶೀಲೆಯ ಮುಖನೋಡಿದ. ಕಣ್ಣಲ್ಲಿ ನೀರು ತುಂಬಿಬರಲು ಅವುಗಳನ್ನು ಒರಸಿಕೊಳ್ಳುತ್ತ, "ತಾಯಿ ತೀರಿಕೊಂಡ ವರುಷದಲ್ಲಿಯೇ ಮದುವೆಯಾದರೆ ಹೆಣ್ಣುಮಕ್ಕಳಿಗೆ ಒಳ್ಳೆಯದೆಂದು ಹೇಳುವ ಹಿರಿಯರ ಮಾತು ನೆನಪಿಗೆ ಬಂತು; ಮದುವೆ ಮಾಡಿಬಿಡೋಣವೆಂದು ನಾನು ನಿಶ್ಚಯಮಾಡಿದೆ." ಎಂದು ನಡುಗುವ ದನಿಯಲ್ಲಿ ಹೇಳಿದ ಅವನ ಸಲಹೆಗೆ ನಿಮ್ಮ ತಂದೆ ರುಕ್ಮಿಣಿಯನ್ನು ವಿಚಾರಿಸಿದ. ಬುದ್ಧಿವಂತಳಾದ ರುಕ್ಮಿಣಿ "ಅಪ್ಪಾ ನೀನೂ, ಮಾವ ನಿಶ್ಚಯ ಮಾಡಿದಮೇಲೆ ನಾನೇನು ಹೇಳಲಿ? ದೊಡ್ಡವರು ನಿಶ್ಚಯಿಸಿದ ಮೇಲೆ ಹುಡುಗರಾದ ನಾವು ಹೇಳುವುದಾದರೂ ಏನಿದೆ? ಎಲ್ಲವೂ ಅನುಕೂಲವಿದ್ದರೆ ಮಾಡಿಬಿಡಿ; ಮಾವ

ನವರ ಮನಸ್ಸೇಕೆ ನೋಯಿಸಬೇಕು?" ಎಂದು ಮೇಲುದನಿಯಲ್ಲಿ ನುಡಿದು ನಸುನಕ್ಕು ಸುಮ್ಮನಾದಳು ರುಕ್ಮಿಣಿ.

ಸತ್ಯಂ ಅಷ್ಟು ವಿಶ್ವಾಸದಿಂದ ಹೇಳುವ ಮಾತಿಗೆ ಯಾರು ಎದುರು ಹೇಳಬೇಕು? ನನಗೂ ಬಾಯಿ ಏಳಲಿಲ್ಲ; ಸುಮ್ಮನಿದ್ದುಬಿಟ್ಟೆ. ಆಯಿತು ಎಂದು ನಿಮ್ಮ ಮಾವ ತಮ್ಮೂರಿಗೆ ಹೋದ; ಹೋಗುವಾಗ ಲಗ್ನದ ಮುಹೂರ್ತ ಬೇಗ ನಿಶ್ಚಯಿಸಿ ಕಾಗದ ಬರೆಯುವೆನೆಂದು ಹೇಳಿದ. ಆಗ ಸುಶೀಲೆ ನಡುವೆಬಂದು "ಅಣ್ಣಾ ರುಕ್ಕಕ್ಕ ಆ ಸಮಯಕ್ಕೆ ದೊಡ್ಡವಳಾಗಿದ್ದ ಳೇನು?" ಎಂದು ಕೇಳಿದಳು; ಆ ಮಾತಿಗೆ ನಾನು ಹೀಗೆ ಹೇಳಿದೆ.

೦ ೦ ೦

.........ಆಗಲೇ ದೊಡ್ಡವಳಾಗಿದ್ದಳಮ್ಮಾ; ಹದಿನಾಲ್ಕು ತುಂಬಿದ್ದವು. ಗಂಡನೊಂದಿಗೆ ಸೇರಿ ಸಂಸಾರ ಮಾಡುವ ವಯಸ್ಸು ಅವಳದು; ನಿಮ್ಮ ಭಾವ ಆಗ ಗುಂಟೂರಿನಲ್ಲಿ ಓದುತ್ತಿದ್ದವನು, ಆಗಾಗ್ಯೆ ಇಲ್ಲಿಗೆ ಬಂದು ಹೋಗುತ್ತಿ ದ್ದನು. ಅವನು ಬಂದಾಗ ಗಂಡನೊಂದಿಗೆ ಸರಸವಾಗಿರುತ್ತಿದ್ದಳು. ಒಂದೇ ಮನೆಯಲ್ಲಿ ಬೆಳೆದವರಂತೆ ಸಂಕೋಚವಿಲ್ಲದೆ ಅವರ ಮಾತುಕತೆಗಳನ್ನು ಕೇಳಿ ನಾನು ಅನೇಕ ಸಲ ಹಿಗ್ಗಿದೆ. ಗಂಡ-ಹೆಂಡಿರೆಂದು ಇವರಿಬ್ಬರಲ್ಲಿ ನಾಚಿಕೆ, ಭೀತಿಯ ಸಂಕೋಚ, ಸಿಟ್ಟು, ಸಿಡುಕು ಇವುಗಳು ಯಾವೂ ಇರಲಿಲ್ಲ. ಇನ್ನೂ ಸಣ್ಣಮಕ್ಕಳಂತೆ ಅವರು ಇದ್ದರು.

ಒಂದು ದಿನ ನಾನು ಮನೆಗೆ ಬರುವಹೊತ್ತಿಗೆ ಅವರಿಬ್ಬರೂ ಪೇಟೆ ಯಿಂದ ಆದೇ ತಾನೆ ಬಂದಂತೆ ನನಗೆ ತೋರಿತು. ಮನೆಯ ಮುಂದೆ ಗಾಡಿ ಇನ್ನೂ ನಿಂತಿತ್ತು; ರುಕ್ಮಿಣಿ ಮೊದಲು ಗಾಡಿಯಿಂದಿಳಿದು, ಅರಿವೆಗಳ ಗಂಟನ್ನು ಗಂಡನ ಕೈಗೆ ಕೊಟ್ಟಳು; ಅದನ್ನು ಆತನು ತೆಗೆದುಕೊಂಡು ಸರಸರ ಮಾಳಿಗೆ ಹತ್ತಿದ; ಅವಳೂ ಆತನ ಹಿಂದೆ ಮಾಳಿಗೆ ಸೇರಿದಳು.

ಇವರಿಬ್ಬರ ಅನ್ಯೋನ್ಯವರ್ತನೆಯನ್ನು ಕಂಡು ಕಣ್ತುಂಬ ನೋಡಿದೆ ಇದೆಲ್ಲವನ್ನೂ ನಿಮ್ಮ ಬಾಯಮ್ಮ ಕೂಡಾ ನೋಡಿದಳು. ತನ್ನ ಸಂತೋಷ ವನ್ನು ವ್ಯಕ್ತಮಾಡುತ್ತ ಅವಳು ನನ್ನನ್ನು ಹತ್ತಿರಕರೆದು "ಮೆಲುದನಿಯಲ್ಲಿ ನೋಡಪ್ಪ ಹುಡುಗಿ ದೊಡ್ಡವಳಾಗಿದ್ದಾಳೆ; ಸಮಯ ಒಂದೇಸವನೆ ಇರುವು

ದಿಲ್ಲ; ಮಾಘಮಾಸದೊಳಗಾಗಿ ಶೋಭನಕಾರ್ಯದ ಶಾಸ್ತ್ರ ಮುಗಿಸಿಬಿಡು. ಆಂದರೆ ಚಂದ'' ಎಂದು ಹೇಳಿದಳು.

"ಹುಡುಗ ಬಿ. ಎ. ಪ್ಯಾಸು ಮಾಡುವ ವರೆಗೂ ನಿಲ್ಲಬೇಕೆಂದಿದ್ದೇನಮ್ಮಾ'' ಎಂದು ನಾನು ಹೇಳಿದೆ.

"ನಿನ್ನ ಯೋಚನೆ ಸರಿಯಲ್ಲ. ಆ ಕಾರ್ಯ ಬಹಿರಂಗವಾಗಿ ನೀನು ಕೈಕೊಳ್ಳದಿದ್ದರೆ, ಈಗಿನ ಕಾಲದ ಹುಡುಗರಪ್ಪ.........ಇನ್ನೇನು ಹೇಳಲಿ? ನಮ್ಮ ಮರ್ಯಾದೆ ಉಳಿಸಿಕೊಳ್ಳುವ ಕಾರ್ಯ ಮಾಡಿಬಿಡು. ಒಂದಿನ ಪಾಟಿಗೆ ಓದು, ಇದರ ಪಾಡಿಗೆ ಇದು; ಬೇಗ ಮಾಡಿಬಿಡಪ್ಪ. ಈ ಮಾಘಮಾಸ ಕಳೆದು ಮತ್ತೊಂದು ಮಾಘಮಾಸಕ್ಕೆ ನಾನು ಮೊಮ್ಮಗನನ್ನೂ ಕಾಣಬಹುದು." ಎಂದು ಹೇಳಿ ಅಡುಗೆಮನೆ ಸೇರಿದಳು ಬಾಯಮ್ಮ.

ಇಷ್ಟರಲ್ಲಿ ಮಾಳಿಗೆಯಿಂದ ರುಕ್ಮಿಣಿ ಹೊಸ ಸೀರೆ ಉಟ್ಟು, ಸೊಗಸಿನ ಹಿಗ್ಗಿನಿಂದ ನನ್ನ ಹತ್ತಿರ ಬಂದಳು. ಅವಳ ಚೆಲುವು ನನ್ನ ಕಣ್ಣು ಕುಕ್ಕಿತು; ಆನಂದದಿಂದ ನಾನು ಉಬ್ಬಿಹೋದೆ. "ತಾಯೀ ಈ ಸೀರೆ, ಕುಬುಸ ನಿನಗೆ ಬಲು ಚನ್ನಾಗಿ ಒಪ್ಪುತ್ತಿದೆ'' ಎಂದೆ. "ಅಪ್ಪಾ ಅವರೇ ನನಗೆ ಇದನ್ನು ಕೊಂಡುಕೊಟ್ಟರು'' ಎಂದು ಅವಳು ಹೇಳಿದಾಗ ಅವಳ ನಗುಮುಖದಿಂದ ಮುತ್ತುಗಳು ಉದುರುವಂತೆನಿಸಿತು.

ಏಕೋ ರುಕ್ಮಿಣಿಯನ್ನು ದಿಟ್ಟಿಸಿನೋಡಿದೆ; ಅವಳಲ್ಲಿ ಅಂದು ಎಲ್ಲಿಯೂ ಇಲ್ಲದ ಚೆಲುವನ್ನು ಕಂಡೆ. ಇಂತಹ ಚೆಲುವಿನ ಕಣಿ ದೇವರಿಂದ ಸೃಷ್ಟಿಸಲ್ಪಡುವದು ಒಂದು ಪೂರ್ವಜನ್ಮದ ಸುಕೃತವೆಂದು ಭಾವಿಸಿದೆ. ಸುಮ್ಮನೆ ನೋಡಿದರೆ ಅವಳಿಗೆ ದೃಷ್ಟಿತಾಕುವುದೆಂದು ಮುಖ ಮತ್ತೊಂದು ಕಡೆ ತಿರುವಿದೆ. ರುಕ್ಮಿಣಿ ಬಾಗಿ ನಮಸ್ಕರಿಸಿದಾಗ ಅವಳನ್ನು ಮನಃಪೂರ್ವಕ ಆಶೀರ್ವದಿಸಿದೆ.

**ಇಂತಹ** ಸೊಬಗಿನ, ಸುಗುಣಗಳ ಮಣಿಯನ್ನು ನೋಡುವ ಭಾಗ್ಯ **ಕಾಂತಿಗೆ** ಇಲ್ಲವಾಯಿತೆಂದು ಮನದಲ್ಲಿಯೇ ಮರುಗಿದೆ. ನನಗೆ ದುಃಖ ಉಕ್ಕಿ ಬಂತು. ನಾನು ನೋಡುತ್ತಿದ್ದಂತೆಯೇ ರುಕ್ಮಿಣಿ ಅವಳ ಫಾಯು ಫೋಟೋದ ಹತ್ತಿರ ಹೋಗಿ ಅದಕ್ಕೆ ನಮಸ್ಕರಿಸುವದನ್ನು ಕಂಡು ನನ್ನ

ಕಣ್ಣುಗಳು ಮಸುಕಾದವು. ಮುಂದೆ ಆ ದೃಶ್ಯ ನೋಡಲಾರದೆ ಮುಖವನ್ನತ್ತ ತಿರುವಿ ನಿಂತುಬಿಟ್ಟೆ.

ಆ ದೃಶ್ಯ! ಕಾಂತಂ ಇನ್ನೊಂದು ಅರ್ಧಗಂಟೆಗೆ ಸಾಯುವಳೆಂಬ ಸಮಯ; ಆಗ ಅವಳ ಬಾಯಿಂದ ಮಾತುಗಳೇ ಹೊರಬರುತ್ತಿರಲಿಲ್ಲ. ರುಕ್ಮಿಣಿ ರಾಧಾಕೃಷ್ಣನನ್ನು ಕಂಕುಳಲ್ಲಿರಿಸಿಕೊಂಡು ಸುಮ್ಮನೇ ನೋಡುತ್ತಿದ್ದಳು; ಬಹಳ ಶ್ರಮಪಟ್ಟು ಅವಳು ಮಕ್ಕಳನ್ನು ಹೆಸರಿಟ್ಟು ಕರೆದು ಕೊನೆಯ ದರ್ಶನಪಡೆದಳು. ಆದರೆ ಅವಳ ನೆಟ್ಟದೃಷ್ಟಿ ರುಕ್ಮಿಣಿಯಿಂದ ಮರೆಯಾಗಲೇ ಇಲ್ಲ. ಅವಳ ಸಾವಿನ ನಂತರ ನಿಮ್ಮೆಲ್ಲರನ್ನು ಆರೈಸಿ ಬೆಳೆಸಿದವಳು ರುಕ್ಮಿಣಿಯೇ.

‘‘ಅಮ್ಮಗೆ ರಾಧಾಕೃಷ್ಣ, ಮತ್ತು ರುಕ್ಮಿಣಿಯೆಂದರೆ ಬಲು ಹೆಚ್ಚಿನ ಪ್ರೇಮ, ಅಲ್ಲವೇನಪ್ಪ?” ಎಂದು ಸುಶೀಲೆ ಕೇಳಿದಳು. “ಕೊನೆಯ ಹುಡುಗನೆಂದು ಅವನಲ್ಲಿ ಆಕೆಗೆ ಹೆಚ್ಚು ಮಮತೆ ಸುಶೀಲ.” ಎಂದು ಸಮಾಧಾನ ಹೇಳಿದೆ. ಆದರೆ, ಸತ್ಯಂ ‘‘ಅಲ್ಲ ಅಲ್ಲ ಮತ್ತೊಂದು ಕಾರಣ ಇದೆ’’ ಎಂದು ಹೇಳಲಾರಂಭಿಸಿದ.

* * *

....ಒಂದು ದಿನ ನಾನು ಪರಊರಿಗೆ ಹೋಗಿ ಹೊತ್ತಾಗಿ ಮನೆಗೆ ಬಂದೆ. ಅಂದು ರುಕ್ಮಿಣಿಯ ತಂದೆ ಊರಲ್ಲಿರಲಿಲ್ಲ. ರಾಧಾಕೃಷ್ಣ ಒಂದೇ ಉಸಿರಿನಲ್ಲಿ ಅಳುತ್ತಲಿದ್ದ. ಬೆಲ್ಲ ಬೇಕೆಂದು ಹಟಹಿಡಿದು ಅಳುವುದನ್ನು ಕಂಡು “ರುಕ್ಕು, ನಿನ್ನ ಸಲುಗೆ ಹೆಚ್ಚಾಯಿತಮ್ಮ; ಅವನು ನಿನ್ನನ್ನು ಸುಮ್ಮನೆ ಕಾಡುತ್ತಾನೆ; ಅವನಿಗೇನು ಬೇಕಂತೆ?’’ ಎಂದು ಕೇಳಿದೆ “ಅವನಿಗೆ ಬೆಲ್ಲ ಬೇಕಂತೆ ?” ಎಂದು ಹೇಳಿದಳು.

“ಇಷ್ಟು ಹೊತ್ತಿನಲ್ಲಿಯೇ ?”

“ಹೊತ್ತೋ ಗಿತ್ತೋ; ಅವನಿಗೇನು ಇದೆಲ್ಲ ?”

“ಅಲ್ಲಮ್ಮಾ, ಹೀಗೆ ಅವನಿಗೇನೇನು ಬೇಕೋ ಅದನ್ನ.......”

“ಹಾಗೇನು ತಿಳಿಯಬೇಡಿ ಮಾವಾ; ತಾಯಿ ಇಲ್ಲದ ಮಗುವನ್ನು ನಾವು ಅಸಮಾಧಾನಗೊಳಿಸಬಾರದು. ಈಗ ಅವನು ಬೇಡಿದುದನ್ನು

ನಾವುಗಳೇ ತಂದುಕೊಡದೆ ಹೋದರೆ, ಈ ಮಗು ಮತ್ತಾರನ್ನು ಕೇಳಬೇಕು? ಇರಲಿ ಬೇಗ ತಂದುಕೊಡು ಎಂದಳು. ಬೇಗ ಪೇಟೆಗೆ ಹೋಗಿ ಬಿಲ್ಲು ತಂದುಕೊಟ್ಟೆ. ಅವನದನ್ನು ಟೊಂಕಕ್ಕೆ ಇಟ್ಟುಕೊಂಡು ಮಲಗಿದನಂತರ ಅವಳು ಊಟಮಾಡಿದಳು. ಹೊತ್ತು ಹನ್ನೊಂದಾದರೂ ಅವನು ಸಮಾಧಾನ ಹೊಂದದ ಹೊರತು ಅವಳ ಹೃದಯಕ್ಕೆ ನೆಮ್ಮದಿಯಾಗುತ್ತಿರಲಿಲ್ಲ.

ಇದನ್ನು ಕಂಡು ನಾನು "ರುಕ್ಮಾ, ಹೀಗೆ ಅವನನ್ನು ಮುದ್ದಿಸಬಾರದಮ್ಮ" ಎಂದು ಹೇಳಿದೆ.

"ಅದೇನು ಪಾಪ ಹಾಗೆನ್ನುವಿರಿ? ಅಮ್ಮ ಜೀವಂತ ಇದ್ದರೆ ಇವನೆಷ್ಟು ಪ್ರೀತಿಯ ಆರೈಕೆಯನ್ನು ಕಾಣುತ್ತಿದ್ದನೋ? ಹೆತ್ತತಾಯಿಯ ಪ್ರೀತಿ ಇಲ್ಲದಿರುವಾಗ ನಾನಾದರೂ ಆ ಪ್ರೀತಿಯನ್ನು ಒದಗಿಸದೇ ಹೋದರೆ ಹೇಗೆ?" ಎಂದು ಸುಖನಿದ್ರೆಯಲ್ಲಿದ್ದ ಅವನ ಮೈ ತಡವುತ್ತ ಹೇಳಿದ ಅವಳ ವಾತ್ಸಲ್ಯದ ಮಾತುಗಳು ನಮ್ಮನ್ನು ಬೆರಗುಗೊಳಿಸಿದವು. ಸ್ವತಂ ಹೇಳಿದ ಈ ಮಾತು ನನಗೂ ನಿಜವೆನಿಸುತ್ತಿದೆ. ಆಗ ನಡೆದ ಸಂಗತಿಯೊಂದು ನನಗೆ ನೆನಪಾಗಲು ನಾನು ಕತೆಯನ್ನು ಮುಂದುವರಿಸಿದೆ.

* * *

ರುಕ್ಮಿಣಿಗೆ ರಾಧಾಕೃಷ್ಣನ ಮೇಲೆ ಪಂಚಪ್ರಾಣ. ಅವನಿಗೆ ಇರುವೆ ಕಡಿದರೂ ಇವಳಿಗೆ ಹೆಚ್ಚಿನ ನೋವಾಗುತ್ತಿತ್ತು. ಅವನ ತಾಯಿಯೇ ಜೀವಂತ ಇದ್ದರೂ, ಇಷ್ಟು ಪ್ರೀತಿಯಿಂದ ನೋಡಲಾರಳೆಂದು ನನ್ನ ಅಭಿಪ್ರಾಯ.

ಒಂದು ದಿನ ರಾತ್ರಿ ಹೊತ್ತಾದರೂ ಓದುತ್ತ ಮಲಗಿದ್ದೆನು. ನಿದ್ರೆ ಹತ್ತಿರಬಹುದು. ಮಧ್ಯರಾತ್ರಿ ಸಮಯದಲ್ಲಿ ನನಗೆ ಎಚ್ಚರವಾಯಿತು. ಯಾರೋ ಒಳಗಡೆ ಮಾತನಾಡುತ್ತಿದ್ದಂತೆ ಕೇಳಿಸಿತು. ರಾಧಾಕೃಷ್ಣನಿಗೆ ಬೆಳ್ಳಿಬಟ್ಟಲಿನಲ್ಲಿ ಹಾಲೂ ಅನ್ನವನ್ನು ಉಣಿಸಲು ರುಕ್ಮಿಣಿ ಯತ್ನಿಸುತ್ತಿದ್ದಳು. ಅವನು ಹಟಮಾಡುತ್ತಿದ್ದ. 'ಏನಮ್ಮಾ ಅದು?' ಎಂದು ಕೇಳಿದೆ.

"ಸಂಜೆ ರಾಧಾ ಅನ್ನತಿನ್ನದೆ ಹಾಗೇ ಮಲಗಿದ್ದ. ಹಟ ಬಂದಿತ್ತು. ಮೇಲೆ ನಿದ್ರೆ. ಆದುದರಿಂದ ಅವನಿಗೆ ಅನ್ನ ಬೇಡೆನ್ನುತ್ತಿದ್ದಾನೆ. ಹಾಲೇನಾದರೂ ಬೇಕೇನೆಂದು ಕೇಳುತ್ತಿದ್ದೇನೆ. ಪಾಪ ಅವನು

ಮಲಗಿದ್ದಾಗ ಬಹಳ ಒದ್ದಾಡಿದ. ಆದ್ದರಿಂದಲೇ ಎಬ್ಬಿಸಿ ಹಾಲನ್ನಾದರೂ ಕುಡಿಸೋಣವೆಂದು ಯತ್ನಿಸುತ್ತಿದ್ದೇನೆ. ಇವನು ಹಸಿವೆಯಿಂದ ಮಲಗಿದಾಗ ನನಗೇಕೋ ಕಸಿವಿಸಿಯಾಗತೊಡಗಿತು. ಕೂಸು ಏನೂ ತಿನ್ನದೆ ಮಲಗಿದರೆ ನನ್ನ ಹೊಟ್ಟೆಯೇ ಬರಿದಾದಂತೆ ನನಗೆ ಸಂಕಟವಾಗತೊಡಗಿತು" ಎಂದು ಹೇಳಿ ಸುಮ್ಮನಾದಳು.

"ಹೀಗೆ ನೀನು ನಿದ್ದೆಗೆಟ್ಟರೆ ಹೇಗಮ್ಮಾ? ನಿನ್ನ ಆರೋಗ್ಯ ಕೆಟ್ಟರೆ ಯಾರು ನೋಡಿಕೋಬೇಕು? ರಾತ್ರಿ ಹುಡುಗರಿಗೆ ಅರೆಹೊಟ್ಟೆ ಇದ್ದರೇನೇ ಆರೋಗ್ಯ. ಮಲಗಮ್ಮಾ ಸುಮ್ಮನೆ" ಎಂದೆ.

"ಇದೇನಪ್ಪ ನಿನ್ನಮಾತು? ಕೂಸು ಬರಿಹೊಟ್ಟೇಲಿ ಮಲಗಿದರೆ ಒಳಿತೆಂದು ಹೇಳುತ್ತೀಯಾ? ಚೆನ್ನಾಯಿತು. ನೀವು ಮಲಕೊಳ್ಳೀಪ್ಪ" ಎಂದು ಅವನಿಗೆ ರಮಿಸಿ, ಮೆಲ್ಲಮೆಲ್ಲನೆ ಹಾಲು ಕುಡಿಸಿದಳು. ಅನಂತರ ಅವನು ಹಾಲು ಕುಡಿದು ಮಲಗಿದಮೇಲೆ ಅವಳೂ ಮಲಗಿದಳು. ಅವಳಿಗೆ ಮೊದಲಿನಿಂದಲೂ ರಾಧಾನ ಮೇಲೆ ಎಲ್ಲಿಯೂ ಇಲ್ಲದ ಮಮತೆ.

"ಅದೇಕೆ, ಒಂದು ದಿನ ರಾಧಾನಿಗೆ ಜ್ವರ ಬಂದಾಗ, ಅವಳು ಪಟ್ಟ ಅವಸ್ಥೆಯೆಂಬೋದು ಹೇಳತೀರದು."

"ಯಾವಾಗಲಪ್ಪ ಅದು?"

"ಕೇಳಮ್ಮಾ ಸುಶೀಲ. ಯಾಕೆ ಅಷ್ಟು ಅವಸರ? ಒಂದು ದಿನ ರಾಧಾನಿಗೆ ಜ್ವರ ಕಾಣಿಸಿಕೊಂಡಿತು. ಸಾಮಾನ್ಯ ಜ್ವರವೆಂದು ಸುಮ್ಮನಿದ್ದೆವು. ಆದರೂ ಡಾಕ್ಟರ್ ಚಲಪತಿರಾಯರ ಔಷಧವನ್ನು ತಂದು ಉಪಚರಿಸಿದೆವು. ಜ್ವರ ೧೦೫° ಗೆ ಕಡಿಮೆ ಇಳಿಯುತ್ತಿರಲಿಲ್ಲ. ಹೀಗೆ ಒಂದು ವಾರ ಕಳೆಯಿತು.

ಎರಡನೆಯ ವಾರವೂ ಜ್ವರ ಕಡಿಮೆಯಾಗಲಿಲ್ಲ. ಹುಡುಗ ಬಹಳ ಬಲಹೀನನಾಗತೊಡಗಿದ.

ರುಕ್ಮಿಣಿಯ ಭಯ ಹೆಚ್ಚಿತು. ಒಂದು ನಿಮಿಷವಾದರೂ ಅವನಿಂದ ದೂರ ಇರುತ್ತಿರಲಿಲ್ಲ. ಅವನ ಹತ್ತಿರವೇ ಇರತೊಡಗಿದಳು. ಅವಳು ಕೊಂಚ

ನೂರಸರಿಪಡಿಸಿಕೊಂಡರೆ, ಅವನು ಚಿರ್‍ರೆಂದು ಚೀರುತ್ತಲಿದ್ದ. ಅವಳೂ ಇನ್ನೂ ಚಿಕ್ಕವಳೇ; ವಯಸ್ಸು ಹದಿನೈದೇ. ಬೇಸರವಿಲ್ಲದೆ ಯಾವಾಗಲೂ ಬೇನೆಯವನ ಹತ್ತಿರ ಮಲಗುವುದೆಂದರೆ ಸಾಮಾನ್ಯ ಕೆಲಸವಲ್ಲ. ಅವಳು ಮಗ್ಗುಲಲ್ಲೇ ಮಲಗಬೇಕೆಂದು ಅವನ ಹಟ. ಅರೆ ನಿಮಿಷವೂ ಬಿಟ್ಟಿರುತ್ತಿರಲಿಲ್ಲ. ಊಟಕ್ಕೆ ಸಹ ಅವಳನ್ನು ಬಿಡುತ್ತಿರಲಿಲ್ಲ. ಅವಳೂ ಏನೂ ತೋಚದೆ ಅವಸರವಸರದಿಂದ ಊಟಮಾಡಿ ಬೇಗ ಅವನ ಹಾಸಿಗೆಯ ಬಳಿ ಬಂದುಬಿಡುತ್ತಿದ್ದಳು. ಅವನ ಹತ್ತಿರ ಕುಳಿತುಕೊಂಡು ಸಮಾಧಾನಪಡಿಸುತ್ತ "ಬಂದಿದ್ದೇನಪ್ಪ ಸುಮ್ಮನೆ ಮಲಗು. ಅಳಬೇಡ. ಅತ್ತರೆ ನಿನಗೆ ತೊಂದರೆ. ಜ್ವರ ಬೇಗ ಬಿಡೋದಿಲ್ಲಪ್ಪ. ಸುಮ್ಮನಾಗಪ್ಪ." ಎಂಬ ಅವಳ ಸವಿ ಮಾತುಗಳು ಅವನಿಗೆ ಶಾಂತಿಯನ್ನುಂಟುಮಾಡುತ್ತಿದ್ದುವು. ಕೂಡಲೇ ಅವಳನ್ನಪ್ಪಿಕೊಂಡು ಅವನು ಸುಮ್ಮನೆ ನಿದ್ದೆ ಮಾಡುತ್ತಿದ್ದ.

ರುಕ್ಮಿಣಿಯ ಹೃದಯದಲ್ಲಿ ಆಗುತ್ತಿದ್ದ ವೇದನೆ ಅವರ್ಣನೀಯ. ಭಯದಿಂದಲೂ ದಿನವೂ ಅಲೆಯುವುದರಿಂದ ಆದ ದೇಹಾಲಸ್ಯದಿಂದ ಅವಳ ಮುಖ ಕಾಂತಿಹೀನವಾಗಿತ್ತು. ಅವಳ ಸುಂದರವಾದ ಮುಖದಲ್ಲಿ ವಿಷಾದಗಳ ಬೇಸರದ ಛಾಯೆ; ಮಸುಗುವ ಕಣ್ಣಲ್ಲಿ ದುಃಖಾಶ್ರುಗಳು; ಆದರೂ ಮುಖದಲ್ಲಿ ನಗು ಒಂದೊಂದು ಸಲ ಮೂಡಿ ಮೂಡಿ ಮಾಯವಾಗುತ್ತಿತ್ತು. ಹೃದಯದ ವೇದನೆಯನ್ನು ಅವಳಿಗೆ ಮುಚ್ಚಿಡುವುದು ಆಗುತ್ತಿರಲಿಲ್ಲ. ಅವಳ ಕಣ್ಣಲ್ಲಿ ಯಾತನೆಯ ನೋವು ಕಂಡು ಬರುತ್ತಿತ್ತು.

ಇಷ್ಟಾದರೂ ಅವಳು ಮನೆಯ ಕೆಲಸದಲ್ಲಿ ಅಜಾಗರೂಕಳಾಗಿರಲಿಲ್ಲ. ಮಾಡಬೇಕಾದ ಕೆಲಸಗಳೆಲ್ಲವನ್ನೂ ಅವಳೇ ಮಾಡುತ್ತಿದ್ದಳು. ಅವನ ಟೆಂಪರೇಚರ್ ರಿಕಾರ್ಡ್ ಮಾಡುವುದು, ಸಮಯಕ್ಕೆ ಸರಿಯಾಗಿ ಔಷಧ ಕೊಡುವುದು, ಅವನಿಗೆ ಹಣ್ಣಿನ ರಸ, ಗ್ಲೂಕೋಸು ಪಾನೀಯ, ಗಂಜಿ ಕೊಡುವುದು ಮುಂತಾದ ಕೆಲಸವನ್ನು ಬೇಸರವಿಲ್ಲದೆ ತಾನೇ ಮಾಡುತ್ತಿದ್ದಳು.

ರೋಗಿಗೆ ಬೇಕಾದುದೆಲ್ಲವನ್ನೂ ರುಕ್ಮಿಣಿಯೇ ತರಿಸುತ್ತಿದ್ದಳು. ಪತಿಗೆ ಎಲ್ಲಾ ಸಮಯ ಶಾಲೆಯಲ್ಲೇ ಕಳೆದುಹೋಗುತ್ತಿದ್ದುದರಿಂದ, ಅವಳೇ ಈ ಕೆಲಸವನ್ನು ಜಾಗರೂಕತೆಯಿಂದ ಮಾಡುತ್ತಿದ್ದಳು. ಡಾಕ್ಟರಿಗೆ ಬೇಕಾದ

ಪ್ರಶ್ನೆಗಳೆಲ್ಲವನ್ನೂ ಅವಳೇ ಉತ್ತರಿಸುತ್ತಿದ್ದಳು. ಡಾಕ್ಟರರೂ ಇವಳ ಆಸ
ಕ್ತಿಗೆ ಮತ್ತು ಜಾಣತನಕ್ಕೆ ಬೆಚ್ಚು ಬೆರಗಾಗುತ್ತಿದ್ದರು.

"ಡಾಕ್ಟರರೇ, ಔಷಧವೇನಾದರೂ ಬದಲು ಮಾಡುವಿರೇನು? ಪೇಟೆ
ಯಿಂದ ಮತ್ತೇನಾದರೂ ತರಿಸಬೇಕೆ?" ಎಂದು ನಾನು ಪ್ರಶ್ನೆಗಳನ್ನು ಕೇಳಿ
ದಾಗ ಅವರು ನಗುನಗುತ್ತ "ನೀವೇಕೆ ಈ ಪ್ರಶ್ನೆಗಳನ್ನು ಕೇಳುತ್ತಿರುವಿರಿ.
ಹೇಳಬೇಕಾದವರಿಗೆ ಹೇಳುತ್ತೇನೆ. ನಿಮ್ಮ ಮಗಳು ತೋರಿಸುತ್ತಿರುವ ಆತುರ,
ಆರೈಕೆ, ಆಸಕ್ತಿ ಸಾಕು. ನೀವು ಕೂಡ ಏತಕ್ಕೆ ಯೋಚನೆಯಿಂದ ಮನಸ್ಸು
ನೋಯಿಸಿಕೊಳ್ಳುವಿರಿ ? ಪಾಪ ಅವಳನ್ನು ಕಂಡರೆ, ನನಗೆ ಅಯ್ಯೋ ಎನಿಸು
ತ್ತಿದೆ." ಎಂದು ನುಡಿಯುತ್ತಿದ್ದರು.

ರಾಘಾನ ಬೇನೆಯ ದಿನಗಳಲ್ಲಿ ರುಕ್ಮಿಣಿಗೆ ಯಾತನೆ ತಪ್ಪುತ್ತಿರಲಿಲ್ಲ.
ಕೆಲಸಮಯ ರೋಗಿಯ ಪಕ್ಕದಲ್ಲಿ ನಾನು ಕುಳಿತಿರುವಾಗ, ಅವನು ಸುಮ್ಮನೆ
'ರುಕ್ಮಕ್ಕ' ಎಂದು ಅಳುತ್ತಿದ್ದನು. 'ರುಕ್ಮಕ್ಕ', 'ರುಕ್ಮಕ್ಕ', 'ರುಕ್ಮಕ್ಕ',
ಎಂದು ಸುಮ್ಮನೇ ಚೀರುವ ಅವನನ್ನು ಸಮಾಧಾನ ಮಾಡಲು ನನಗೆ ಬಲು
ಕಷ್ಟವೆನಿಸುತ್ತಿತ್ತು. ಆದರೂ ಇಷ್ಟೆಲ್ಲ ಕಷ್ಟವನ್ನು ಸಹಿಸುವ ಶಕ್ತಿ ಅವಳ
ಲ್ಲಿತ್ತು.

ನಾವುಗಳು ಯಾರಾದರೂ ವಿಶ್ರಾಂತಿಗಾಗಿ ಕೂಡುವೆವೆಂದು ಹೇಳಿ
ದಾಗ ಅವಳು ಸುಮ್ಮನಿರುತ್ತಿರಲಿಲ್ಲ. "ಯಾಕೆ, ನನಗೇನೂ ಬೇಸರವಿಲ್ಲ.
ಕೂಸಿನ ಬೇನೆಯು ದೇವರ ದಯೆಯಿಂದ ಬೇಗ ಗುಣವಾದರೆ ಸಾಕು. ನನ
ಗೇನೂ ಶ್ರಮವಿಲ್ಲ. ಇಂತಹ ಒಳ್ಳೆಯ ಮಗುವನ್ನು ಯಾರು ಸಂತೈಸುವು
ದಿಲ್ಲ ? ಈ ಕೂಸನ್ನು ಯಾರೂ ನೋಯಿಸಬೇಡಿ. ಅವನಿಗೆ ನಾನೆಂದರೆ
ಸಮಾಧಾನ. ಬೇನೆಯ ಮಗುವಿಗೆ ಸಮಾಧಾನದ ಆರೈಕೆಯಿಂದಲೇ ರೋಗ
ಗುಣವಾಗಬಹುದೆಂದು ನನಗೆನಿಸುತ್ತದೆ." ಎಂದು ಅವನನ್ನು ಅಪ್ಪಿಕೊಂಡು
ಮುದ್ದಿಸುತ್ತಿದ್ದಳು.

ಆದರೆ ಶುಕ್ರವಾರ ಮಾತ್ರ ಅವಳು ಒಂದೆರಡು ಗಂಟೆಗಳ ಸಮಯ
ರೋಗಿಯಿಂದ ದೂರ ಇರುತ್ತಿದ್ದಳು. ಅಂದು ಎರೆದುಕೊಂಡು, ಪೂಜೆ
ಯಲ್ಲಿ ಕಳೆಯದೇ ಹೋದರೆ ಅವಳಿಗೆ ಶಾಂತಿಯೇ ಇರುತ್ತಿರಲಿಲ್ಲ. ಶುಕ್ರ

ಹಠವಾಗಿತ್ತು. ಇಲ್ಲವಾದರೆ ಮದುವೆಯೇ ಬೇಡವೆಂದು ಅವರ ಮೂರ್ಖ ತನವಾಗಿದ್ದುದರಿಂದ, ಮದುವೆ ಮಾಡದೆ ಗತ್ಯಂತರವಿರಲಿಲ್ಲ. ಆದುದರಿಂದ ನೀವು ಬಂದೇತೀರಬೇಕೆಂದು ಪತ್ರ ಬರೆವೆ......." ಎಂದು ಸತ್ಯಂ ತನ್ನ ಮಾತು ಮುಗಿಸಿದ.

"ಜ್ವರದಲ್ಲೇ ಇದ್ದವನನ್ನು ತೆನಾಲಿಗೆ ಹೇಗೆ ಕರೆದುಕೊಂಡು ಹೋದಿರಿ? ಅಂಥವನನ್ನು ಕದಲಿಸಿದರೆ ಕೆಡುಕೆಂದು ಹೇಳುವರಲ್ಲ? ಅಲ್ಲದೆ ಅಂದು ಮಳೆ ಯೆಂದು ತಿಳಿದುಬಂತು. ನೀವೆಲ್ಲಾ ಮದುವೆಗೆ ಹೇಗೆ ಬಂದಿರಿ?" ಎಂದು ಸುಶೀಲೆ ಕೇಳಿದಳು. ಅವಳ ಮಾತಿಗೆ ಉತ್ತರರೂಪವಾಗಿ ನಾನು ನನ್ನ ವಿವರಣೆಯನ್ನು ಮುಂದುವರಿಸಿದೆ.

о о о

"ನೀನು ಕೇಳಲಿಲ್ಲವೇನು ಸುಶೀಲ ನಿನ್ನ ಮಾವ ಹೇಳಿದ ವಾತು? ಬೇಗರು ಅವಸರ ಪಡಿಸಿದುದರ ಮೂಲಕ ಮದುವೆಗೆ ಬಂದೇತೀರಬೇಕೆಂದು ಸತ್ಯಂ ಟೆಲಿಗ್ರಾಂ ಮಾಡಿದ. ಅಂತಹ ಸಂದರ್ಭದಲ್ಲಿ ನಡೆಯಲಿರುವ ಶುಭ ಕಾರ್ಯಕ್ಕೆ ಅಡ್ಡಬರಬಾರದೆಂದು ನಾನೂ ಅವರ ಮಾತಿಗೆ ಒಪ್ಪಬೇಕಾ ಯಿತು. ಸತ್ಯಂ ಕೂಡ ಅನವಸರದ ಮನುಷ್ಯನಲ್ಲವೆಂದು ನನಗೆ ತಿಳಿದಿತ್ತು, ಆದುದರಿಂದಲೇ ಮದುವೆಗೆ ಒಪ್ಪಿಕೊಂಡೆ.

ಆ ಸಮಯದಲ್ಲಿ ರಾಧಾಬಾಬುವಿನನ್ನು ಕದಲಿಸಿದರೆ ಏನಾಗುವುದೋ ಎಂಬ ವಿಷಯ ನನ್ನ ಮನಸ್ಸಿಗೆ ಹೆಚ್ಚು ಕಲವುಂಟುಮಾಡಿತು. ನನಗೂ ಭಯವೆನಿಸಿತು. ಆದರೆ ಡಾಕ್ಟರನನ್ನು ಕೇಳಲಾಗಿ ಅವರು "ಭಯ ವಿಲ್ಲ ಅವನನ್ನು ಕರೆದುಕೊಂಡುಹೋಗಬಹುದು. ನೀವು ನಾಳೆ ಹೊರಡುವ ಹಾಗಿದ್ದರೆ ನಾನೂ ಬರುವೆನು ಸ್ವಲ್ಪ ಕೆಲಸವಿದೆ" ಎಂಬ ಡಾಕ್ಟರ ಧೈರ್ಯದ ಮಾತು ಕೇಳಿ ನನಗೆ ಹೋದಜೀವ ಬಂದಂತಾಯಿತು. ಆದುದ ರಿಂದ ಮಾರನೆಯ ದಿನವೇ ನಾವು ತೆನಾಲಿಗೆ ಹೊರಟೆವು.

ಮಳೆಯೆಂಬ ವಿಷಯವನ್ನು ನಡುವೆ ಸುಶೀಲೆ ನೆನಪು ಮಾಡಲಾಗಿ ನನ್ನ ಕತೆಯನ್ನು ಹೀಗೆ ಮುಂದುವರಿಸಿದೆ.

ರೋಗಿಗೆ ಎಚ್ಚರವಿರಲಿಲ್ಲ. ರುಕ್ಮಿಣಿ ಅವನನ್ನು ತನ್ನೆದೆಗೆ ಅಪ್ಪಿ ಕೊಂಡು ಶಾಲಿನಿಂದ ಮುಚ್ಚಿದಳು. ಅವಳ ಬೆಚ್ಚನ ತೋಳತೆಕ್ಕೆಯಲ್ಲಿ ಸುಖವಾಗಿ ಮಲಗಿದ್ದನು. ಹೊರಗೆ ಗಡಗಡ ನಡುಗಿಸುವ ಛಳಿ! ಮೇಲೆ ಭೀಕರವಾದ ಹನಿಮಳೆ. ಇಂತಹ ಭಯಾನಕ ಪರಿಸ್ಥಿತಿಯಲ್ಲಿ ರುಕ್ಮಿಣಿಗೆ ಎಲ್ಲವೂ ನಿರಾಶಾದಾಯಕವಾಗಿರಲು, ನಾವು ರೈಲುನಿಲ್ದಾಣವನ್ನು ಸೇರಿ ದೆವು. ಡಾಕ್ಟರರು ನಮ್ಮನ್ನು ಅಲ್ಲಿ ಕೂಡಿಕೊಂಡರು. ರುಕ್ಮಿಣಿ, ಮತ್ತು ರಾಧಾ ಸೆಕೆಂಡಕ್ಲಾಸಿನಲ್ಲಿ ಪ್ರಯಾಣಮಾಡಿದರು. ಅವರ ಹತ್ತಿರ ಡಾಕ್ಟ ರರೂ ಕುಳಿತಿದ್ದರು. ನಾವು ಅದರ ಪಕ್ಕದಲ್ಲೇ ಇದ್ದ ಮೂರನೇ ತರಗತಿಯ ಡಬ್ಬಿಯಲ್ಲಿ ಕುಳಿತೆವು; ರೈಲು ಕದಲಿತು. ಅದು ಮೆಲ್ಲಗೆ ನಡೆಯುತ್ತಿರು ವಂತೆನಿಸಿತು.

ಈ ಮಾರ್ಗವಾಗಿ ರುಕ್ಮಿಣಿ ಅನೇಕ ಸಲ ಪ್ರಯಾಣ ಬೆಳಿಸಿದ್ದಾಳೆ. ಇದಲ್ಲದೆ ಒಂದೆರಡು ಮೈಲುಗಳ ವರೆಗೂ ಕಾಲುನಡಗೆಯಲ್ಲಿ ಸಂಜೆ ಸಮಯ ಅಡ್ಡಾಡಲು ಹೋದುದೂ ಉಂಟು. ಆದುದರಿಂದ ಇದೆಲ್ಲವೂ ಅವಳಿಗೆ ಪರಿಚಿತವಾದ ಪ್ರದೇಶವೇ. ಅಡ್ಡಾಡಲು ಹೋದಾಗ ಆ ಪ್ರದೇಶದ ಪ್ರತಿ ಯೊಂದು ಗಿಡ, ಮರ, ಬಳ್ಳಿ, ಎಲ್ಲವೂ ಅವಳ ಸ್ನೇಹ ಬೆಳೆಸಲು ಕುತೂಹಲಿ ಗರಂತೆ ವರ್ತಿಸಿದರೇನೋ ಎಂಬಂತೆ ಅವಳು ಅವುಗಳನ್ನು ಮುಟ್ಟಿ ಮುದ್ದಿಡು ತ್ತಿದ್ದಳು. ಗಾಳಿಗೆ ಅಲುಗಾಡುವ ಅವುಗಳೂ ಅವಳ ಪ್ರೀತಿಯ ನೇಹಿಗ ರೆಂಬುವುದು ವ್ಯಕ್ತವಾಗುತ್ತಿತ್ತು. ಇಂದು ಅವಳು ಗಾಡಿಯಲ್ಲಿ ಕುಳಿತು ಹೋಗುತ್ತಿರಲು ಅವುಗಳು ದುಃಖಿಸುತ್ತಿರುವಂತೆನಿಸಿತು. ಮತ್ತೇನು, ಬೇಗ ಬಂದುಬಿಡುವೆನು ಎಂದು ಅವರಿಗೆ ಸಮಾಧಾನ ಹೇಳುವಳೇನೋ ಎಂಬಂತಿತ್ತು ಅವಳ ಕನಿಕರದ ನೋಟ.

ತೆನಾಲಿಯನ್ನು ನಾವು ಸೇರುವ ಹೊತ್ತಿಗೆ ಮಳೆ ಚೆನ್ನಾಗಿ ಬೀಳತೊಡ ಗಿತ್ತು. ನಿಲ್ದಾಣದಲ್ಲಿಯ ನಿಲುಮನೆಗೆ ಹೋಗಬೇಕಾದರೆ ತೊಯ್ದುಕೊಂಡೇ ಹೋಗಬೇಕಿತ್ತು. ಹೇಗಪ್ಪ ಎಂದು ನಾನು ಯೋಚಿಸುತ್ತಿರುವಾಗ, ರುಕ್ಮಿ ಣಿಯ ಜತೆಯಲ್ಲಿ ಪ್ರಯಾಣಬೆಳಿಸಿದ ದೊಡ್ಡ ಮನುಷ್ಯನೊಬ್ಬನ ಓವರ್ ಕೋಟಿನ ಸಹಾಯದಿಂದ ಅವರು ಮಳೆಯಲ್ಲಿ ತೋಯಿಸಿಕೊಳ್ಳದೇ ಹೊರಗೆ

ಬಂದರು. ನಮಗೆ ಈ ರೀತಿ ನೆರವಾದವರಿಗೆ ಕೃತಜ್ಞತಪೂರ್ವಕವಾಗಿ ನಮಸ್ಕರಿಸಿದೆ.

ಅವರು ನನ್ನ ಕಡೆ ನೋಡುತ್ತ "ಈ ಹುಡುಗಿ ನಿಮ್ಮ ಮಗಳೇನು? ಎಂತಹ ಒಳ್ಳೇ ಹುಡುಗಿ ಸ್ವಾಮಿ? ಎಂತಹ ವಿನಯ? ಇಂಗ್ಲೀಷು ಚನ್ನಾಗಿ ಮಾತನಾಡಬಲ್ಲಳು; ನನಗೆ ಬಹಳ ಸಂತೋಷವೆನಿಸಿತು. ಇಂತಹ ಸುಗುಣ ವಂತಿಯನ್ನು ನಾನು ಕಂಡಿಲ್ಲ. ಇವಳ ತಂದೆಯಾದ ನೀವೇ ಧನ್ಯರು." ಎಂದು ಇಂಗ್ಲೀಷಿನಲ್ಲಿ ಹೇಳಿದ ಮಾತುಗಳು ನೊಂದ ನನ್ನೆದೆಗೆ ಹಾಲೆರೆ ದಂತಾಯಿತು. ಅವರಿಗಾಗಿ ಹೊರಗೆ ನಿಂತ ತಮ್ಮ ಕಾರಿನಲ್ಲಿ ಅವರಿಬ್ಬ ರನ್ನೂ ಕುಳ್ಳಿರಿಸಿಕೊಂಡು "ನೀವು ಹಿಂದಿನಿಂದ ಬನ್ನಿ. ನಾನು ಇವರನ್ನು ಅವರ ಮಾವನವರ ಮನೆಯಲ್ಲಿ ಬಿಟ್ಟುಹೋಗುವೆನು" ಎಂದು ಹೇಳಿ ಡಾಕ್ಟರ ರನ್ನೂ ಅದೇ ಕಾರಿನಲ್ಲಿ ಕುಳ್ಳಿರಿಸಿಕೊಂಡು ಅವರು ಹೊರಟೇಬಿಟ್ಟರು. ಮಿಕ್ಕವರೆಲ್ಲರೂ ಕುದುರೆಗಾಡಿ ಹತ್ತಿ ನಾವು ಮನೆಯನ್ನು ಪ್ರವೇಶಿಸುವ ವೇಳೆಗೆ ಮತ್ತೊಂದು ದೊಡ್ಡ ಮಿಂಚುಹೊಳೆಯಿತು. ಮನೆಯಲ್ಲಿದ್ದ ರುಕ್ಮಿ ಣಿಯ ಮುಖ ಆಗ ಹುಚ್ಚಳಂತೆ ಬೀಳುಪೇರಿತ್ತು. ಅವಳು ಗಾಬರಿಯಿಂದ ನನ್ನ ಕಡೆ ನೋಡಿದಳು. ನಾನು ಅವಳನ್ನು ನೋಡಿ ಸುಮ್ಮನೇ ಇದ್ದುಬಿಟ್ಟೆ...

......"ರುಕ್ಮಿಣಿಗೆ ಅಷ್ಟೊಂದು ನೀರಸವಾದಾಗ ನನ್ನ ಮದುವೆ ಏತಕ್ಕೆ ಮುಂದಕ್ಕೆ ಹಾಕಲಿಲ್ಲ? ತಮ್ಮನಿಗೆ ವಿಪರೀತ ಜ್ವರ! ಅಕ್ಕಗೆ ಓಡಾಡಲು ಅನುಕೂಲವಿಲ್ಲ; ಯಾರಿಗೂ ಮನಶ್ಶಾಂತಿ ಇಲ್ಲ; ಸಂತೋಷವಂತೂ ದೂರದ ಮಾತಾಯಿತು. ಅಕ್ಕ ರಾಧಾನ ಹತ್ತಿರವೇ ಇರಬೇಕಾಯಿತು. ಈ ಪರಿಸ್ಥಿತಿಯನ್ನು ಕಂಡೂ ಮದುವೆ ಮುಂದೂಡದೇ ಏತಕ್ಕೆ ನೇರವೇರಿ ಸಿಟರಿ?'' ಎಂದು ಕೇಳಿದ ಸುಶೀಲಳ ಪ್ರಶ್ನೆಗೆ ಚಿಕ್ಕಮ್ಮ ಹೀಗೆ ತನಗೆ ತಿಳಿದ ವಿಷಯವನ್ನು ವಿವರಿಸಿದಳು.

× × ×

........ರಾಧಾಗೆ ಜ್ವರವೆಂದು ಎಲ್ಲರಿಗೂ ಗಾಬರಿ. ಅಲ್ಲದೆ ಹಸೆಯ ಮೇಲೆ ಕೂಡುವವರು ನಿಮ್ಮ ಮಾವ, ಅತ್ತೆಯರು. ಕಾಂತಂಳೇ ಸ್ವತಃ ಈ ಮದುವೆ ನಡೆಸುವ ಸುಯೋಗ ದೊರೆಯಲಿಲ್ಲವೆಂದು ನಮಗೆಲ್ಲ ಎನಿಸಿತು.

ರುಕ್ಮಿಣಿಯು ಬುದ್ಧಿ ತಿಳಿದ ಹುಡುಗಿ ಸಮಯದ ಮಹತ್ವವನ್ನು ತಿಳಿದು ಸುಮ್ಮನಿದ್ದಳು. ಮದುವೆ ಮಂಟಪಕ್ಕೆ ಅವಳನ್ನು ಕರೆದುಕೊಂಡು ಹೋಗುವ ಮುನ್ನ ಗೌರಿಪೂಜೆ ಮುಗಿಸಿದ ಮೇಲೆ, ಅವಳು ತಾಯಿಯ ಫೋಟೋದ ಮುಂದೆ ನಿಂತು ಆವೇಶದಿಂದ ತಾಯಿಯನ್ನು ನೆನೆದು ಅವಳಿಗೆ ನಮಸ್ಕರಿಸಿದಳು. ದೇವರಲ್ಲಿ ತೋರುವಷ್ಟು ಭಕ್ತಿ ವಿಶ್ವಾಸಗಳನ್ನು ತೋರಿ ಪ್ರಣಾಮ ಮಾಡಿದಳು ಸುಶೀಲೆ. ನಾನೂ, ರುಕ್ಕೂ ಇಬ್ಬರೂ ಪಕ್ಕದಲ್ಲೇ ನಿಂತು ನೋಡುತ್ತಿದ್ದೆವು. ಆಗ ನಮ್ಮಿಬ್ಬರಿಗೆ ದುಃಖವು ಉಕ್ಕಿ ಬಂತೆಂದಮೇಲೆ ಸ್ವತಃ ತಾಯಿಯನ್ನು ಕಳೆದುಕೊಂಡ ಸುಶೀಲೆಗೆ ಎಷ್ಟು ನೋವಾಗಿರಬೇಡ?

ಆ ಮೇಲೆ ಮಂಗಳಸೂತ್ರಧಾರಣೆ ನಡೆಯಿತು. ವಧೂವರರು ಇಬ್ಬರೂ ನಿಮ್ಮ ತಂದೆಗೆ ನಮಸ್ಕರಿಸಲು ಬಂದರು. ವಧುವು ತಂದೆತಾಯಿಯರಿಗೆ ಜತೆಯಾಗಿ ನಮಸ್ಕರಿಸಬೇಕಾದ ಸಮಯವದು. ಅಂಥ ಸಂದರ್ಭದಲ್ಲಿ ನಿಮ್ಮ ತಂದೆ ಒಬ್ಬರೇ ನಿಂತಿರುವ ಸನ್ನಿವೇಶ ಕಂಡು ನಮಗೆಲ್ಲ ಅಯ್ಯೋ ಎನಿಸಿತು. ಬುದ್ಧಿಶಾಲಿಯಾದ ರುಕ್ಮಿಣಿಗೆ ಆಗ ತನ್ನ ತಾಯಿಯ ನೆನಪು ಹೆಚ್ಚಾಗಿ ಆಗಿರಬೇಕೆಂದು ನಮಗನಿಸಿತು. ಆದರೆ ಇಂಥ ಮಂಗಲ ಪ್ರಸಂಗಗಳಲ್ಲಿ ಕಣ್ಣಲ್ಲಿ ನೀರುತರುವುದು ಅಶುಭವೆಂದು ಚಿಮ್ಮಿಬರುವ ಕಣ್ಣೀರನ್ನು ತಡೆಯುವ ಅವಳ ಸ್ಥೈರ್ಯವನ್ನು ಕಂಡು ನಮಗೆಲ್ಲ ಆಶ್ಚರ್ಯದ ಜತೆಗೆ ಬಲು ನೋವಾಯಿತು. ಆ ಸ್ಥೈರ್ಯ ನಿಮ್ಮ ತಂದೆಗೆ ಮಾತ್ರ ಇರಲಿಲ್ಲ. ಹೀಗೆಂದು ಹೇಳಿ ನಮ್ಮ ಚಿಕ್ಕಮ್ಮ ತಲೆಬಾಗಿದಳು. ಹೇಳಲೇಬೇಕಾದ ವಿಷಯ ಮತ್ತೊಂದು ನನಗೆ ನೆನಪಾಯಿತು. ಕತೆಯ ಎಳೆಯನ್ನು ನಾನೇ ಹೀಗೆ ಮುಂದುವರಿಸಿದೆ.

೦ ೦ ೦

........ಅಳಿಯ, ಸುಶೀಲೆ, ಇಬ್ಬರೂ-ವಧೂವರರು-ನನಗೆ ನಮಸ್ಕಾರ ಮಾಡಲು ಬಂದರು. ಆಗ ಸುಶೀಲೆಯ ಮುಖದಲ್ಲಿ ಹೊಸ ಕಳೆಬಂದಿತ್ತು. ದೀಪದ ಬೆಳಕಿನಲ್ಲಿ ಅವಳ ಅರಳಿದ ಕಣ್ಣಾಲಿಯ ಪಾಪ ಮಿನುಗಿದವು. ಅವಳಿಗೆ ಹೆರಳು ಹಾಕಿ ಹೂ ಹೆಣೆದಿದ್ದರು. ಅವಳ ಕಣ್ಣಲ್ಲಿ ಹೊಸಹುರುಪಿನ

ಗೆಲುವಿನ ಛಾಯೆ ಕಾಣಿಸಿಕೊಂಡಿತು. ಟೊಂಕವನ್ನು ಸರಿಪಡಿಸಿಕೊಂಡು ಅವಳು ನಮಸ್ಕರಿಸುವಾಗ ಮೌನವಾಗಿಯೇ ಆಶೀರ್ವದಿಸಿದೆ.

ಆಗ ಒಂದು ತಮಾಷೆ ನಡೆದುಹೋಯಿತು. ವಧೂವರರು ನನಗೆ ನಮಸ್ಕಾರ ಮಾಡುತ್ತಿದ್ದಾಗ ನನ್ನ ತೀರಹತ್ತಿರ-ಪಕ್ಕದಲ್ಲೇ-ಯಾರೋ ನಿಂತಂತೆ ಭಾಸವಾಯಿತು. ಬದಿಗೆ ತಿರುಗಿ ನೋಡಿದೆ. ನಿಮ್ಮ ತಾಯಿ ಕಾಂತಂ ನನ್ನ ಪಕ್ಕದಲ್ಲಿ ನಿಂತಂತೆ ಕಂಡುಬಂತು. ಬೀಳಿ ಸೀರೆ, ಹಸಿರು ಕುಪ್ಪುಸದಿಂದ ಅಲಂಕೃತಳಾದ ಅವಳ ಕಣ್ಣಲ್ಲಿ ಕಾಡಿಗೆ, ಮುಖದಲ್ಲಿ ತೀಡಿದ ಕುಂಕುಮ, ಮತ್ತು ಮಂದಹಾಸ, ಇವು ಎಲ್ಲವೂ ಪ್ರತ್ಯಕ್ಷ ನನ್ನೆದುರು ಕಾಣಿಸಿಕೊಂಡವು. ನಾನು ಮತ್ತೊಂದು ಸಲ ತಿರುಗಿ ನೋಡಿದೆ; ಆಗ ಅವಳು ತನ್ನ ಮುಖವನ್ನು ಮತ್ತೊಂದು ಕಡೆ ತಿರುವಿದಂತಿತ್ತು. ತಲೆಯಲ್ಲಿ ಮುಡಿದಿದ್ದ ಹೂಗಳನ್ನು ಕಂಡೆ; ಜೋಡಿಸಿ ಹೆಣೆದ ಹೆರಳೂ ಕಾಣಿಸಿತು. ಮುಂದೊಂದು ಕ್ಷಣದಲ್ಲಿ ಅವಳು ಮಾಯವಾಗಿದ್ದಳು! ಇದೇನೆಂದು ಚಕಿತನಾದೆ. ಆಗ ನಡೆದುಹೋದುದು ಕನಸೇ, ಇಲ್ಲವೆ ನನಸೇ ಎಂದು ಚಿಂತೆಗೊಳಗಾದೆ. ಇದೇನು ನನ್ನ ಭ್ರಮೆಯಾಗಿರಬಹುದೇ, ಎಂದು ಯೋಚಿಸತೊಡಗಿದೆ. ಸುತ್ತಲೂ ನೋಡಿದೆ; ಯಾರೂ ಇರಲಿಲ್ಲ; ಹೊಸಬರು ಯಾರಾದರೂ ಬಂದರೆ ಎಂದು ಕೇಳಿದೆ; ಯಾರೂ ಇಲ್ಲವೆಂದರು. ನನ್ನಾಕೆ-ಕಾಂತಂ-ಈ ಶುಭಪ್ರಸಂಗದಲ್ಲಿ ಅಪ್ರತ್ಯಕ್ಷವಾಗಿ ಬಂದುನಿಂತು ತನ್ನ ಪ್ರೀತಿಯ ಮಗಳನ್ನು-ಸುಶೀಲೆಯನ್ನು-ಆಶೀರ್ವದಿಸಿ ಹೋಗಿರಬೇಕೆಂದು ನನಗೆನಿಸಿತು. ನನಗೆ ಕೊಂಚ ಸಮಾಧಾನವಾಯಿತು. ಈ ಮಾತಿನ ನಡುವೆ ಶಾಸ್ತ್ರಿ ಬಾಯಿ ಹಾಕಿ, "ಅಲ್ಲಪ್ಪ, ಸುಶೀಲಕ್ಕನ ಮದುವೆ ಆದ ನಂತರ ನಮ್ಮನ್ನು ತೆನಾಲಿಯಲ್ಲಿ ಬಿಟ್ಟು ನೀನು ಮಚಲೀಪಟ್ಟಣಕ್ಕೆ ಹೋಗಿಬಿಟ್ಟಂತೆ" ಎಂದು ಎಚ್ಚರಿಸಿದ ಮಾತಿಗೆ ಮಾರುತ್ತರವಾಗಿ ನಾನು ಹೀಗೆ ಹೇಳಿದೆ. ಏನು ಮಾಡೋದಪ್ಪ, ನಾನು ಹೋಗಲೇಬೇಕಾಯಿತು. ನನ್ನ ಕೆಲಸದ ಅವಸರ; ನನಗೆ ರಜೆ ಇರಲಿಲ್ಲ. ನಾನು ಹೋಗುವಾಗ ನನಗೆ ಯಾವ ಬಗೆಯ ಗಾಬರಿಯೂ ಇರಲಿಲ್ಲ. ನಿಮ್ಮೆಲ್ಲರನ್ನೂ ಸೋದರಮಾವನ ಮನೆಯಲ್ಲೇ ಬಿಟ್ಟು ಹೊರಟಿದುದರಿಂದ, ನನ್ನ ಮನಸ್ಸು ನೆಮ್ಮದಿಗೊಂಡಿತ್ತು. ಸುಶೀಲ

ಹದಿನಾರನೆಯ ದಿನದ ನಾಗೋಲೀ ವರೆಗೆ ಅಲ್ಲಿ ಇರಬೇಕಾದುದು ಅವಶ್ಯ ವಾಗಿತ್ತು. ರಾಧಾನನ್ನೂ ಆಗ ಹೆಚ್ಚು ಕದಲಿಸುವುದು ಸಾಧ್ಯವಿರಲಿಲ್ಲ. ನಿನ್ನನ್ನೂ ಮತ್ತು ವಿಜಯಳನ್ನೂ ಕರೆದುಕೊಂಡು ಹೋಗಬಹುದಾಗಿತ್ತು. "ಮದುವೆಮನೇಲಿ ಇವರಿಬ್ಬರೇನು ನಮಗೆ ಭಾರ, ಭಾವ? ಇಲ್ಲೇ ಇರಲಿ" ಎಂದು ಹೇಳಿದ ನಿಮ್ಮ ಮಾವನ ಮಾತಿಗೆ ಸರಿಯೆಂದು ಒಪ್ಪಿಕೊಂಡೆ. ಇದ ಲ್ಲದೆ ರಾಧಾನಿಗೆ ನಿಮ್ಮ ಮಾವನ ನೆರವಿನಿಂದ ಒಳ್ಳೇ ಔಷಧವೂ ಸಿಗುವ ಸಂಭವವಿತ್ತು. ಅವನಿಗೆ ಬೇಗ ಗುಣವಾಗಬಹುದೆಂಬ ಆಶೆ. ಮೇಲೆ ರುಕ್ಮಿಣಿಯು ಸಹಾ ಈ ನಿಮ್ಮ ಮಾವನ ಸಲಹೆಯೇ ಸರಿಯೆಂದು ಒಪ್ಪಿದಳು. ಮಾಡುವುದೇನೆಂದು ನಾನು ಯೋಚಿಸುತ್ತಿರುವಾಗ ರುಕ್ಮಿಣಿ ನನ್ನ ಹತ್ತಿರ ಬಂದು "ಯೋಚನೆಯಾಕಪ್ಪಾ? ಮಾವನ ಮನೇಲಿ ನಮಗೇನು ಕಡಮೆ? ಇದೇನು ನಮಗೆ ಪರಕೀಯರ ಮನೆಯೇ? ನಾವು ಸುಖವಾಗಿರ್ತೇವೆ. ನಾನು ತಪ್ಪದೇ ದಿನಾಲೂ ನಿನಗೆ ಕಾಗದ ಹಾಕುತ್ತೇನೆ; ಗಾಬರಿಯಾಗಿ ಮತ್ತೆ ಮತ್ತೆ ನೀನು ಇಲ್ಲಿಗೆ ಓಡಿ ಬರಬೇಡ" ಎಂದು ಹಿರಿಯ ಮುತ್ತೈದೆಯಂತೆ ನನಗೆ ಧೈರ್ಯ ಹೇಳಿದಳು. "ಅಲ್ಲಮ್ಮಾ, ರಾಧಾನ ಬೇನೆ ಹೆಚ್ಚಿಗೆ ಹೋಗಿ ದರೆ ಹೇಗಮ್ಮಾ? ನನಗೇಕೋ ಭಯವಾಗುತ್ತಿದೆ" ಎಂದೆ. ಅವಳು ಇನ್ನೂ ಹೆಚ್ಚಿನ ಧೈರ್ಯದಿಂದ "ಅದೇಕೆ? ಅವನ ಪ್ರಾಣಕ್ಕೆ ನನ್ನ ಪ್ರಾಣವನ್ನಾ ದರೂ ಕೊಟ್ಟು ಅವನನ್ನು ಉಳಿಸಿಕೊಳ್ಳುವೆನಪ್ಪಾ. ಯೋಚನೆಬೇಡ" ಎಂದು ನನಗೆ ಸಮಾಧಾನ ಹೇಳಿ ನನ್ನನ್ನು ಊರಿಗೆ ಕಳಿಸಿದಳು.

ನಾನು ಭಾರವಾದ ಹೃದಯದಿಂದ, ಹೋಗಲಾರದ ಮನಸ್ಸಿನಿಂದ ಮೆಲ್ಲನೆ ಊರ ಕಡೆ ಹೊರಟೆ. ಯಾಕೋ ಆಗ ನನ್ನನ್ನು ಎಲ್ಲಿಯೂ ಇಲ್ಲದ ಭಯವು ಆವರಿಸಿತ್ತು. ನಾನಿದ್ದುದು ಬಂದರೇ ಆದರೂ, ನನ್ನ ಮನಸ್ಸೆ ಲ್ಲವೂ ತೆನಾಲಿಯಲ್ಲಿಯೇ ಇತ್ತು. ಅಂದು ಪ್ರಪಂಚದಲ್ಲಿ ನಾನೊಬ್ಬನೇ ಏಕಾಕಿಯೆಂಬ ಭಾವನೆ ನನ್ನನ್ನು ವೇಧಿಸುತ್ತಿತ್ತು. ಅವ್ಯಕ್ತವಾದ ದುಃಖ ವೊಂದು ನನ್ನನ್ನು ಪೂರ್ತಿ ಆವರಿಸಿತ್ತು.

ದಿನವೂ ತೆನಾಲಿಗೆ ಹೋಗುವ ರೈಲನ್ನು ನೋಡಿದಾಗಲೆಲ್ಲ ನನ್ನವ ರನ್ನು ನೆನೆದುಕೊಂಡು ಆ ರೈಲನ್ನೇ ನೋಡುತ್ತಲಿದ್ದೆ. ಆ ರೈಲನ್ನು ನೋಡಿ

ದಾಗಲಿಲ್ಲ ನನಗೊಂದು ಬಗೆಯ ಸಮಾಧಾನ; ಎಂದು ನಾನು ಸುಮ್ಮನಾಗಲು ನನ್ನ ಚಿಕ್ಕಮ್ಮ ಮುಂದಿನದನ್ನು ತನ್ನ ಮಾತಿನಲ್ಲಿ ಮತ್ತೆ ಹೀಗೆ ಹೇಳಿದಳು.

° ° °

……ಸರಿಯಾಯಿತು. ನೀನು ಹೋದನಂತರ ನಡೆದ ವಿಷಯವನ್ನು ವಿವರಿಸುತ್ತೇನೆ. ರಾಧಾಗೆ ಜ್ವರ ಹೆಚ್ಚಿತು; ಬಹಳ ಹೆಚ್ಚಾಯಿತು; ಅವನಿಗೆ ಎಚ್ಚರವೇ ಇರಲಿಲ್ಲ; ಮುಚ್ಚಿದ ಕಣ್ಣು ತೆರೆಯಲೇ ಇಲ್ಲ.

ಇದೇನು ಕಷ್ಟಬಂತೆಂದು ಯೋಚಿಸತೊಡಗಿದೆವು; ಸತ್ಯಂ ಸಹಿತ ಗಾಬರಿಯಾದ. ಯಾಕೆ ಸತ್ಯಂ ನೀನು ಇಷ್ಟು ಗಾಬರಿಯಾದುದ ? ಎಂದು ಚಿಕ್ಕಮ್ಮ ಅವನ ಕಡೆ ನೋಡಲು ಅದಕ್ಕೆ ಸಮಾಧಾನವೆಂದು ಸತ್ಯಂ ಮಕ್ಕಳ ಕಡೆ ನೋಡುತ್ತ ಹೀಗೆ ಹೇಳಿದ.

* * *

……ಆನಂತರ ನಡೆದ ವಿಷಯ ನಿಮ್ಮಪ್ಪನಿಗೆ ನಾನು ಹೇಳಲೇ ಇಲ್ಲ; ಹೇಳುವ ಪ್ರಸಂಗವೂ ಒದಗಿಬರಲಿಲ್ಲ. ರಾಧಾಗೆ ಜ್ವರದಲ್ಲೇ ಭೇದಿಗಳು ಆರಂಭವಾದವು. ಸ್ವಲ್ಪ ಸ್ವಲ್ಪ ರಕ್ತವೂ ಬೀಳತೊಡಗಿತು. ಮೊದಲೇ ಹುಡುಗ, ಅದರಲ್ಲಿ ರಕ್ತಭೇದಿಯೆಂದರೆ ಅವನ ನಿತ್ರಾಣ ದಿನದಿನಕ್ಕೂ ಹೆಚ್ಚ ತೊಡಗಿತು; ಬೇನೆ ಹಿಡಿತಕ್ಕೆ ಬರಲಿಲ್ಲ. ಡಾಕ್ಟರ್ ರಾಮರಾಯರಿಂದಲೂ, ಊಳಕ್ಕಿಯವರಿಂದಲೂ ಇಂಜಕ್ಷನ್ ಕೊಡಿಸಿದೆ; ಅವನ ಬೇನೆ ಬಲಿಯ ತೊಡಗಿತು.

ನನ್ನ ಆ ಅಲೆದಾಟ, ಸಂಕಟ ರುಕ್ಮಿಣಿ ನೋಡುತ್ತಾ ಇದ್ದಳು. ರಾಧಾನ ಅವಸ್ಥೆ ನಡುನೀರಿನಲ್ಲಿದ್ದವನಂತೆಂದು ಅರ್ಥ ಮಾಡಿಕೊಂಡಳು. ರಾತ್ರಿ, ಹಗಲೂ ಅವಳು ಅವನಿಗಾಗಿ ಮಾಡಿದ ದುಡಿತ ಏನೆಂದುಹೇಳಲಿ? ಗಂಟೆಗಂಟೆಗೆ ಅವನಿಗೆ ಔಷಧ ಕೊಡುವುದು, ಹೊಲಸಾದ ಅರಿವೆಗಳನ್ನು ಬದಲಿಸಿ ಅವನನ್ನು ಸಂತೈಸುವುದು, ಯಾವಾಗಲೂ ಏನೋ ಒಂದು ಕೆಲಸವನ್ನು ಮಾಡುವುದರಲ್ಲಿಯೇ ಅವಳು ವಿರಾಮವಿಲ್ಲದೆ ದುಡಿಯುತ್ತಿದ್ದಳು. ಸ್ವಲ್ಪ ವಿಶ್ರಾಂತಿ ದೊರೆಯಿತೆಂದರೆ ಅವನ ಹತ್ತಿರವೇ ಕುಳಿತು ನಿಶ್ಚೇಷ್ಟಿತನಾಗಿ

ಮಲಗಿದ ಆ ಮಗುವನ್ನು ಒಂದೇಸವನೇ ನೋಡುತ್ತ ಕಾಲಕಳೆಯುತ್ತಿದ್ದಳು; ಮೈತಪ್ಪಿ ನಿದ್ರೆ ಮಾಡುತ್ತಿರಲೇ ಇಲ್ಲ.

"ಕೊಂಚ ವಿಶ್ರಾಂತಿ ಪಡೆಯಮ್ಮ ಹೀಗೆ ದುಡಿದರೆ ನಿನ್ನ ಪ್ರಕೃತಿ ಕೆಡುತ್ತದೆ; ನೀನು ಮಂಚ ಹಿಡಿದರೆ ಮುಂದೇನು ಗತಿ. ನಿನ್ನಿಂದಲ್ಲದೆ ಅವನಿಗೆ ಈ ಬಗೆಯ ಆರೈಕೆ ದೊರೆಯುವದು; ಹಠ ಹಿಡಿಯಬೇಡವಮ್ಮಾ" ಎಂದು ನಾನಾರೀತಿಯಲ್ಲಿ ಕೇಳಿಕೊಂಡೆ; ಸ್ವಲ್ಪಾದರೂ ನಿದ್ರೆ ಮಾಡಬೇಕೆಂದು ನಾವು ಬಲವಂತಮಾಡಿದೆವು. ಅವಳು "ಇದೇನು ಪಾಪ? ರಾಧಾ ಯಾವಾಗ ಎದ್ದು ಅಕ್ಕಾ ಎಂದು ಕೂಗುವನೋ? ಆಗ ಅವನ ಕಣ್ಣಿಗೆ ನಾನು ಬೀಳದಿದ್ದರೆ ಅವನು ಅಳುವುದಿಲ್ಲವೆ? ಅವನ ಅವಸ್ಥೆ ಹೀಗಿರುವಾಗ ನನಗೆ ನಿದ್ರೆಯಾದರೂ ಹೇಗೆ ಬರಬೇಕು? ಬೇನೆಯವನಿಗೆ ಸರಿಯಾದ ಆರೈಕೆ ಮಾಡದಿದ್ದರೆ ಅವನಿಗೆ ಹೇಗೆ ಗುಣವಾಗಬೇಕು?" ಎನ್ನುತ್ತಿದ್ದಳು.

"ಅದೇನಮ್ಮ ಅವನು ಇನ್ನೂ ಚಿಕ್ಕವನು; ನಾವುಗಳು ಯಾರಾದರೂ ಉಪಚಾರ ಮಾಡುವೆವು. ನೀನು ನಡುನಡುವೆ ಕೊಂಚ ವಿಶ್ರಾಂತಿ ಪಡೆಯಲೇಬೇಕು" ಎಂದು ಒತ್ತಾಯಪಡಿಸಿದರೆ "ನಿಮ್ಮಲ್ಲಿ ಯಾರೂ ಅವನಿಗೆ ನೆರವಾಗಬೇಕಿಲ್ಲ; ಅಮ್ಮ ಸಾಯುವಾಗ ಇವನನ್ನು ನನಗೊಪ್ಪಿಸಿರುವಳು. ಯಾವ ಲೋಪವೂ ಇಲ್ಲದಂತೆ ಅವನನ್ನು ಆರೈಸುವೆನೆಂದು ಆಕೆಗೆ ಸಾವಿನ ಮಂಚದ ಮೇಲೆ ನಾನು ಮಾತುಕೊಟ್ಟಿರುವೆನು. ನೀವುಗಳು ಇವನಿಗೆ ಉಪಚಾರ ಮಾಡದೆ ಕಷ್ಟವನ್ನುಂಟುಮಾಡುವಿರೆಂದು ನನ್ನ ತರ್ಕವಲ್ಲ. ಅವನನ್ನು ಕಾಣದೆ ಸ್ವಲ್ಪ ಸಮಯವಾದರೂ ದೂರ ಇರಬೇಕೆಂದರೆ ನನ್ನ ಮನಸ್ಸೇಕೋ ಒಪ್ಪಲೊಲ್ಲದು. ಎದ್ದು ದೂರ ಸರಿಯಲು ನನ್ನ ಕಾಲುಗಳು ಏಳಲಾರವು; ಸತ್ತು ಸ್ವರ್ಗದಲ್ಲಿರುವ ಆ ಮಹಾತಾಯಿಯ ಮಾತು ನಡೆಸುತ್ತಿರುವೆನು. ಇದರಲ್ಲಿ ನನಗೇನೂ ತೊಂದರೆಬಾರದಂತೆ ಆ ನನ್ನ ತಾಯಿ ನೋಡಿಕೊಳ್ಳುವಳು" ಎಂದು ನಮ್ಮ ಬಾಯಿಯನ್ನು ಮುಚ್ಚಿಸುತ್ತಿದ್ದಳು. ಒಂದು ದಿನ ಅವನ ಬೇನೆ ಬಲು ವಿಕೋಪಕ್ಕೆ ಇಟ್ಟುಕೊಂಡಿತು. ಅವನು ಇನ್ನೇನು ಬದುಕಲಾರನೆಂದು......" ಹೀಗೆಂದು ಹೇಳಿ ಸತ್ಯಂ ರಾಧಾಕೃಷ್ಣ ನನ್ನು ಹತ್ತಿರ ಕರೆದುಕೊಂಡು ತಲೆಯ ಮೇಲೆ ಕೈ ಆಡಿಸುತ್ತಿರುವಾಗ,

ಇಲ್ಲಿಯವರೆಗೂ ಏನನ್ನೂ ಹೇಳದೆ ಸುಮ್ಮನೆ ಕುಳಿತಿದ್ದ ಪಂಕಜಮ್ಮನವರು ನನ್ನ ಚಿಕ್ಕಮ್ಮನ ಹತ್ತಿರ ಸರಿದುಬಂದು ನಮ್ಮೆಲ್ಲರಿಗೂ ಮುಂದಿನ ಕತೆಯನ್ನು ಹೀಗೆ ವಿವರಿಸಿದರು.

ಆ ಸಮಯದಲ್ಲಿ ನಾನು ಅಲ್ಲೇ ಇದ್ದೆ. ನಿಮಗೆ ನೆನಪಿದೆಯೋ ಇಲ್ಲವೋ? ನಮ್ಮದು ಸತ್ಯಂ ರವರ ಪಕ್ಕದ ಮನೆ. ಹುಡುಗನ ಮೈ ಬಹಳ ಚೆನ್ನಾಗಿಲ್ಲವೆಂದು ತಿಳಿದಾಗ ನಾನೂ ಅನೇಕಸಲ ಬಂದು ರುಕ್ಮಿಣಿ ಜತೆಯಲ್ಲಿ ಕುಳಿತುಕೊಳ್ಳುತ್ತಿದ್ದೆ. ರುಕ್ಮಿಣಿ ಎಂತಹ ಹುಡುಗಿ! ನಾನೆಷ್ಟೋ ಮಂದಿ ಹುಡುಗಿಯರನ್ನು ಕಂಡಿದ್ದೇನೆ; ಆದರೆ ಇಂತಹ ನಿಷ್ಠಾವಂತ ಹೆಣ್ಣನ್ನು ನಾನು ಆದುವರೆವಿಗೂ ಕಂಡಿರಲಿಲ್ಲ. ಹಡೆದ ತಾಯಿಯು ಸಹಾ ಇಷ್ಟು ಶ್ರದ್ಧೆಯನ್ನು ತೋರುತ್ತಿದ್ದಳೋ ಇಲ್ಲವೋ ಹೇಳಲಾರೆ. ವಯಸ್ಸು ಇನ್ನೂ ಚಿಕ್ಕದು; ಆದರೂ ಏನವಳ ಬುದ್ಧಿ? ಅವನು ಕೊಂಚ ಅಲುಗಾಡಿದರೆ ಸಾಕು; ಹತ್ತಿರ ಬಂದು ಮುಖಕ್ಕೆ ಮುಖವಿಟ್ಟು ಏನುಬೇಕು ರಾಧಾ? ಎಂದು ಮಮತೆಯಿಂದ ಕೇಳುವಾಗ ಅವಳ ಮನಸ್ಸಿನ ಆವೇಗ, ದೈನ್ಯತೆ, ಅಂತಃಕರಣ ಎಲ್ಲವೂ ಅವಳ ಮುಖದಲ್ಲಿ ಒಡಮೂಡುತ್ತಿತ್ತು. ರಾಧಾನನ್ನು ಸಾವಿರ ಕಣ್ಣುಗಳಿಂದ ಕಾಯ್ದು ರಕ್ಷಿಸಿದ ಪೂಜ್ಯಳು ಅವಳು.

ಅದು ಹಾಗಿರಲಿ, ನಿಜವಾದ ಮತ್ತೊಂದು ವಿಷಯ ಸತ್ಯಂ ನಿಮಗೆ ಹೇಳಲಿಲ್ಲ; ಒಂದು ದಿನ ಅವನ ಆಶೆಬಿಟ್ಟುಬಿಟ್ಟು........ಅಹುದು ಆ ವಿಷಯ ನಡದದ್ದೇ. ರಾತ್ರಿ ಎಂಟರ ಸಮಯ; ಡಾಕ್ಟರ್ ರಾಮರಾಯರು ನನ್ನನ್ನು ಹೊರಗೆ ಕರೆದು ಹಿರಿಯವಳೆಂದು ತಿಳಿದು "ತಾಯಿ ಇವತ್ತು ಕೊಂಚ ಗಂಡಾಂತರದ ದಿನ. ನೀವು ಸ್ವಲ್ಪ ರಾತ್ರಿ ರುಕ್ಮಿಣಿಯ ಹತ್ತಿರವೇ ಇರಬೇಕು. ಈ ಒಂದು ರಾತ್ರಿ ಸುರಕ್ಷಿತ ದಾಟಬೇಕು" ಎಂದು ಹೇಳಿ ಹೋದರು. ನಾನು ಮನೆಗೆ ಹೋಗದೇ ಅಲ್ಲಿಯೇ ಇದ್ದೆ. ಅಂದೆಲ್ಲ ರಾಧಾನ ದೃಷ್ಟಿ ಮೇಲಿನ ಲೋಕದ ಕಡೆಯೇ ಹೊರಳಿತ್ತು. ಇದನ್ನು ಕಂಡು ಸತ್ಯಂ ನನ್ನನ್ನು ನೋಡಿ "ಅವನೇಕೆ ಹಾಗೆ ಮೇಲೆ ನೋಡುತ್ತಲಿದ್ದಾನೆ?"

ಎಂದು ಕೇಳಿದ; ಆದರೆ ನಮ್ಮ ಮನಸ್ಸಿನ ಭಯದ ಅರ್ಥವನ್ನು ಜಾಣೆಯಾದ ರುಕ್ಮಿಣಿ ಆಗಲೇ ಗ್ರಹಿಸಿದ್ದಳು.

"ಚಿಕ್ಕಮ್ಮಾ, ರಾಧಾನ ನನ್ನ ಸ್ವಾಧೀನಮಾಡಿ ಹೋಗ್ಯಾಳೆ ಅವ್ವ; ಏನಾದರೂ ಕೆಡುಕಾಯಿತೆಂದರೆ ಆಕೆಗೆ ನಾನೇನು ಜವಾಬು ಹೇಳಲಿ?" ಎಂದು ಅವಳು ಅಳಲು ಪ್ರಾರಂಭಿಸಿದಳು. ಅವಳನ್ನು ಸಮಾಧಾನ ಪಡಿಸುತ್ತ "ರುಕ್ಮಿಣಿ, ನೀನೇನು ಮಾಡಬಲ್ಲೆ? ನಿನ್ನ ಶಕ್ತಿಮೀರಿ ಕಷ್ಟಪಟ್ಟೆ. ನಿನ್ನ ಈ ದುಡಿತ ನೋಡಿ ದೇವರಿಗೇ ದಯೆ ಬರಲಿಲ್ಲವೆಂದಮೇಲೆ ನಿನ್ನ ತಾಯಿಯ ಪಾಡೇನು? ಭಯಪಡಬೇಡವ್ವ; ಕೆಟ್ಟದಿನಗಳು ಇವು; ಗುಣವಾಗುವುದು'' ಎಂದು ನಾನು ಸಮಾಧಾನ ಹೇಳಿದೆ.

ಅವಳು ಮೂಕಸನ್ನೆಯಿಂದ ಪ್ರಶ್ನಾರ್ಥಕವಾಗಿ ನನನ್ನೇ ನೋಡಿದಳು. ಮಾತು ಹೆಚ್ಚಾದರೆ ರೋಗಿಗೆ ತೊಂದರೆಯೆಂದು ಭಾವಿಸಿ, ಮಾತಿಲ್ಲದ ಮೌನದಲ್ಲಿಯೇ ದೇವರನ್ನು ಪ್ರಾರ್ಥಿಸೆಂದು ಸೂಚಿಸಿದೆ.

ರುಕ್ಮಿಣಿಯ ಕಣ್ಣಲ್ಲಿ ನೀರೂರಿತು. ಅವಳ ಮಮತೆ ಪೂರ್ಣ ಹೃದಯದಲ್ಲಿ ಏನೋ ಒಂದು ಯೋಚನೆ ಹೊಳೆದುಹೋಯಿತು. ಅವಳು ನನನ್ನು ಹತ್ತಿರ ಕರೆದು ಕಿವಿಯಲ್ಲಿ "ಚಿಕ್ಕಮ್ಮ ನನ್ನ ಮುದ್ದು ತಮ್ಮನಿಗೆ ಜೀವದಾನ ಮಾಡಲೇಬೇಕೆಂದು ಪಾರ್ವತಿದೇವಿಯನ್ನು ಪ್ರಾರ್ಥಿಸಿ ಬರುತ್ತೇನೆ. ನೀವು ಇಲ್ಲೇ, ಇವನ ಪಕ್ಕದಲ್ಲೆ, ಇಗೋ ಹೀಗೇ ಇವನ ಮೇಲೆ ಹೀಗೆ ಕೈ ಇಟ್ಟುಕೊಂಡು ಇರುವಿರ? ನಾನು ಬೇಗ ಬಂದುಬಿಡ್ತೇನೆ" ಎಂದು ಒಳಗೆ ಹೋದಳು. ಮುಂದೇನು ಮಾಡುವಳೆಂಬುದನ್ನು ನೋಡುತ್ತ ನಾನು ಅಲ್ಲಿಯೇ ಕುಳಿತುಕೊಂಡೆ.

ಅವಳು ಹಿತ್ತಲಲ್ಲಿಯ ಭಾವಿಗೆ ಹೋಗಿ ಕೈ, ಕಾಲು, ಮುಖ ತೊಳೆದುಕೊಂಡು ಅರಿವೆಗಳನ್ನು ಬದಲಿಸಿ, ಒಂದರ್ಧಗಂಟೆಯವರೆಗೆ ದೇವರ ಮನೆಯಲ್ಲಿ ದೇವಿಯ ಮುಂದೆ ಕುಳಿತಳು; ಪ್ರಾರ್ಥನೆಯಲ್ಲಿ ಲೀನವಾದಳು.

ರುಕ್ಮಿಣಿಯು ಪ್ರಾರ್ಥನೆ ಮುಗಿಯಿಸಿ ರೋಗಿಯ ಮಂಚದ ಹತ್ತಿರ ಬಂದಾಗ ಅವಳ ಮುಖದಲ್ಲಿ ಹಿಂದಿನ ಚಿಂತೆ, ದುಗುಡ, ದುಃಖ ಯಾವುದೂ

ಇರಲಿಲ್ಲ. ಯಾವುದೋ ನೂತನವಾದ ಕಾಂತಿ, ವಿಕಾಸ, ತೇಜಸ್ಸು ಅವಳ ಮುಖವನ್ನು ಆವರಿಸಿತ್ತು. ಅವಳು ನಮ್ಮ ಸಮೀಪ ಬಂದು "ಇನ್ನು ನನ್ನ ತಮ್ಮಗೆ ಭಯವಿಲ್ಲವಮ್ಮ! ಚಿಕ್ಕಮ್ಮ, ಅವನು ಜೀವಿಸುವನು. ದೇವಿಗೆ ನನ್ನ ಸೊಲ್ಲು ಕೇಳಿಸಿತು; ಅವಳು ಅನುಗ್ರಹಿಸಿದಳು," ಎಂದು ಮುಗುಳುನಕ್ಕು ಹೇಳಿದಳು. ಹಾಗೇ ಆಗಲಿ ಎಂದು ನಾವು ಅವಳ ಮಾತಿಗೆ ತಲೆಯಾಡಿಸುತ್ತ ಮೌನವಾಗಿಯೇ ಅವಳ ಮಾತಿಗೆ ಬೆಂಬಲವನ್ನಿತ್ತೆವು.

ಮಾರನೆಯ ದಿನ ಡಾಕ್ಟರರು ಬಂದು ಹುಡುಗನು ಅಷ್ಟು ಆರೋಗ್ಯವಾಗಿದ್ದುದನ್ನು ಕಂಡು ಬೆರಗಾದರು. ಇವನು ಪ್ರಾಣದಿಂದ ಉಳಿದುದು ಒಳ್ಳೇ ಅದೃಷ್ಟವೇ ಆಗಲಿ, ನಮ್ಮ ಔಷಧಗಳೇನೂ ಪ್ರಯೋಜನವಾಗಲಿಲ್ಲವೆಂದು ಹೇಳಿ, ಕೊನೆಗೆ ರುಕ್ಮಿಣಿಯ ಬೇಡಿಕೆ ದೇವರು ಕೇಳಿದನೆಂದು ಹಿರಿಹಿರಿ ಹಿಗ್ಗಿದರು. ಅವರು ಹೊರಗೆದ್ದು ಹೋಗುವಾಗ ರುಕ್ಮಿಣಿಯನ್ನು ಕಂಡು "ತಾಯಿ ನಿನ್ನ ದೈವಭಕ್ತಿ ಇಂದು ಈ ಮಗುವಿನ ಪ್ರಾಣವನ್ನುಳಿಸಿದೆ; ನೀನೇ ಪುಣ್ಯವಂತಳು. ನಿನ್ನ ಈ ನಿಷ್ಠೆಗೆ ದೇವರು ವರವನ್ನು ಕೊಟ್ಟಿರುವನು" ಎಂದು ಹೇಳಿದ ಮಾತಿಗೆ ರುಕ್ಮಿಣಿ ಮಗುವಿನ ಕಡೆ ನೋಡುತ್ತ ಅವನ ಮುಖದ ಮೇಲೆ ಮೆಲ್ಲಗೆ ಕೈ ಆಡಿಸಿದಳು.

ಈ ಮಾತನ್ನು ಹೇಳುವಾಗ ನಮ್ಮ ಮುಂದೆ ಕುಳಿತಿದ್ದ ರಾಧಾಕೃಷ್ಣ ಒಂದು ಸಲ ರುಕ್ಮಿಣಿಯ ಫೋಟೋದ ಕಡೆ ನೋಡಿ ಕೃತಜ್ಞತೆಯಿಂದ ತಲೆಬಾಗಿದ; ಆಗ ಗಂಟೆ ಒಂಬತ್ತಾಗಿತ್ತು. ಹೊರಗೆ ಗಾಳಿಯ ಭೀಕರತೆ ಕಡಿಮೆಯಾಗಿತ್ತು. ಎಲ್ಲರೂ ಮೌನದಲ್ಲಿಯೇ ಕುಳಿತಿದ್ದೆವು.

ರಾಧಾನನ್ನು ನಾವು ಯಾರಾದರೂ ಬೈದರೆ ತನ್ನ ಆಣೆ ಎಂದು ಅನೇಕ ಸಲ ರುಕ್ಮಿಣಿ ತನ್ನ ಪತ್ರಗಳಲ್ಲಿ ಬರೆದಿದ್ದಾಳೆಯೆಂದು ನಾನು ಹುಡುಗನಿಗೆ ಹೇಳಿದೆ. ಶಾಸ್ತ್ರಿ ಉತ್ಸಾಹದಿಂದ "ಆ ಕಾಗದಗಳು ಈಗ ನಿಮ್ಮ ಹತ್ತಿರ ಇವೆ ಏನು?" ಎಂದು ಕೇಳಿದ.

"ಇವೆ" ಎಂದೆ.

ಎಲ್ಲರ ಮುಖಗಳು ಸಂತೋಷದಿಂದ ಅರಳಿದವು. ಅವರು ಆ ಪತ್ರಗಳ ವಿವರಗಳನ್ನು ತಿಳಿಯಲು ಆತುರಗೊಂಡವರಂತೆ ನನಗೆನಿಸಿತು. ಕೊನೆಗೆ

ಸುಶೀಲೆ "ಆ ಪತ್ರಗಳನ್ನು ಒಂದು ಸಲ ಓದುವಿರಾ?" ಎಂದು ಕೇಳಿದಳು. ಹುಡುಗರೆಲ್ಲರೂ ಸುಶೀಲೆಯ ಸೂಚನೆಯನ್ನೇ ಅನುಮೋದಿಸಿದರು. ಸರಿಯೆಂದು ಆವಳು ಬರೆದ ಎರಡು ಕಾಗದಗಳನ್ನು ತಂದು ಅದರಲ್ಲಿ ಮೊದಲಿಗೆ ರಾಧಾಗೆ ಗುಣವಾದ ವಿಚಾರವನ್ನು ಕುರಿತು ಆವಳು ಬರೆದ ಪತ್ರದ ವಿವರವನ್ನು ಅವರಿಗೆ ಓಗೆ ಓದಿ ಹೇಳಿದೆ.

''....ರಾಧಾಕೃಷ್ಣನಿಗೆ ಜ್ವರ ಕಡಿಮೆಯಾಗಿದೆ. ಹಣ್ಣಿನರಸದೊಂದಿಗೆ ಹಾಲೂ ಕಾಫೀ, ಕೊಡಬಹುದೆಂದು ಡಾಕ್ಟರರು ಸೂಚಿಸಿದ್ದಾರೆ. ದೇವಿ ಪಾರ್ವತಿಯ ಕೃಪೆಯಿಂದ ತಮ್ಮ ಬದುಕಿದ; ನನಗೆ ಹೆಚ್ಚಿನ ಸಂತೋಷವೆನಿಸಿದೆ. ನೀವು ಸುಮ್ಮನೆ ಗಾಬರಿಗೊಳ್ಳುವಿರೆಂದು, ಹಿಂದೆ ನಾಲ್ಕು ದಿನಗಳಲ್ಲಿ ತಮ್ಮನ ಬೇನೆ ಬಹಳ ಹೆಚ್ಚಾದ ವಿಷಯದ ಬಗ್ಗೆ ಬರೆಯಲಿಲ್ಲ. ಆವನು ಉಳಿಯುವನೆಂದು ನಾವು ಯಾರೂ ತಿಳಿದಿರಲಿಲ್ಲ. ದೇವಿಯ ಕೃಪೆ, ತಾಯಿಯ ಆಶೀರ್ವಾದ; ಇನ್ನೊಂದು ವಾರದ ವರೆವಿಗೂ ಅವನಿಗೆ ಅನ್ನ ಬೇಡೆಂದು ಡಾಕ್ಟರರೆ ಹೇಳಿರುವರು. ಆಗಲೇ ಅವನು 'ಅನ್ನ' ಎಂದು ಹಟಹಿಡಿದಿರುವನು. ಪಾಪ! ಅವನು ಎಷ್ಟುದಿನವಾಯಿತು ಅನ್ನದ ಅಗಳು ಕಾಣದೆ? ಮಾವ ಮನೆಯಲ್ಲಿರುವಾಗ ಸುಮ್ಮನಿರುವನು; ಅವರು ಹೊರಗೆ ಹೋದರೆಂದರೆ ಆಯಿತು ನನ್ನನ್ನು ಕಾಡುವನು; ಆವನನ್ನು ಸಮಾಧಾನಮಾಡುತ್ತಿರುವೆನು. ನಾವಿಬ್ಬರು ಅದೃಷ್ಟವಂತರು. ಮನೆಗೆ ಗಂಡುಮಗು ಉಳಿದ. ಯಾರಬಾಯಲ್ಲೂ ಇದೇ ಮಾತು. ಅವನು ಬಲು ಅದೃಷ್ಟವಂತನೆಂದು ಎಲ್ಲರೂ ಆಶೀರ್ವದಿಸುವವರೇ. ಅವನನ್ನು ಮುದ್ದಿಟ್ಟು ಲಾಲಿಸದ ಜನರೇ ಇಲ್ಲ. ಅವನು ಮತ್ತೆ ಜನ್ಮತಾಳಿದಂತೆ. ಇವನ ಪ್ರಾಣವನ್ನುಳಿಸಿದ ದೇವರಿಗೆ ಮತ್ತೊಮ್ಮೆ ನಮಸ್ಕರಿಸುವೆನು ......"

ಸತ್ಯಂ ಮತ್ತು ಆತನ ಹೆಂಡತಿಯ ಬಗ್ಗೆ ಬರೆದ ಕಾಗದ ಎರಡನೆಯದು. ಇದು ಅವಳ ಕರುಳನ್ನು ಹೇಗೆ ಹಿಚುಕಿತು ಎಂಬುದನ್ನು ತಿಳಿಸುತ್ತದೆ. ಅದರ ವಿವರ ಹೀಗಿದೆ:—

''.......ಅಪ್ಪಾ, ರಾಧಾನಿಗೆ ಗುಣವಾಗುತ್ತಿದೆ; ನನ್ನ ಮತ್ತು ಮಾವನ ಮಾತು ಪಕ್ಕಿತು. ಆದರೆ ಅತ್ತೆಯವರಾದ ರಾಜಮ್ಮ ಆಡಿಕೊಳ್ಳುವ ಮಾತುಗಳು ಮಾತ್ರ ನನಗೆ ಶೂಲಪ್ರಾಯವಾಗಿವೆ......'' ಎಂದು ಮುಂದೆ ಓದಲೋ ಬೇಡವೋ ಯೆಂದು ಸತ್ಯಂನ ಮುಖದ ಕಡೆ ನೋಡಿದೆ. ಆವನಿಗೇನಾದರೂ ಕಷ್ಟವೆನಿಸುವುದೇನೋಯೆಂದು ತಿಳಿದೆ. ಸತ್ಯಂ ನನ್ನ ಮನದಿಂಗಿತವನ್ನು ಅರ್ಥಮಾಡಿ

ಕೊಂಡು "ನೀನು ಸುಮ್ಮನಾದ ಕಾರಣ ನನಗೆ ತಿಳಿದಿದೆ ಭಾವ. ನನಗೇನಾದರೂ ನೋವಾಗುವುದೆಂದು ಭಾವಿಸಿ ನೀನು ಯೋಚಿಸುತ್ತಿರುವಿ. ರುಕ್ಮಿಣಿಯ ವಿಷಯ ನನಗೆ ತಿಳಿಯದೆ? ಅವಳ ಮುಖದಿಂದ ಎಂದಿಗೂ ಸುಳ್ಳುಬರುವುದೇ ಇಲ್ಲ. ನಮ್ಮ ಅತ್ತೆಯವರ ವಿಷಯ ನನಗೂ ತಿಳಿದೇ ಇದೆ. ಅವಳಷ್ಟು ನೋಯುವ ಮಾತುಗಳನ್ನು ಆಡಿರಲೇಬೇಕು. ಕಾಗದವನ್ನು ಪೂರ್ತಿ ಓದಿಬಿಡು, ಭಾವ." ಎಂದು ಸತ್ಯಂ ಹೇಳಿದ ಆ ಮಾತಿಗೆ ಪಂಕಜಮ್ಮ ಸುಮ್ಮನಿರದೆ ತಾನು ನಡುವೆ ಹೀಗೆ ಮಾತನಾಡಿದಳು.

........ಇವೆಲ್ಲವನ್ನೂ ಸತ್ಯಂ ತಿಳಿದಿದ್ದ; ಅವಳ ಬಗ್ಗೆ ಎಲ್ಲಾ ತಿಳಿದಿದೆ; ಅವನದು ದುಡುಕುವ ಸ್ವಭಾವವಲ್ಲ; ಒಳಗೇ ಕುದಿಯುವ ರೀತಿ ಅವನದು. ತಂದೆ, ತಾಯಿ ಇಲ್ಲದ ಅನಾಥನಾದ ಅವನನ್ನು ನೀವು ಸಾಕಿ ಸಲಹಿದ ವಿಷಯ ಅವನಿಗೆ ತಿಳಿದಿಲ್ಲವೇನು? ನಿಮ್ಮ ಉಪಕಾರದ ಹೊರೆ, ಮರೆಯುವ ಸ್ವಭಾವ ಅವನದಲ್ಲ; ಎಂದಿಗೂ ಮರೆಯುವುದಿಲ್ಲ. ಅವನನ್ನು ನೀವು ದೊಡ್ಡ ಮಗನಂ" ಪೋಷಣ ಮಾಡಿದಿರಿ; ಅನಂತರ ಅವನನ್ನು ಓರ್ವ ಮನೆತನದವನನ್ನಾಗಿ ಮಾಡಿ, ಅವನ ಮನೆಗೆ ಅನೇಕಸಲ ಹೋಗಿಬಂದಿರಿ. ಅವನ ಯೋಗಕ್ಷೇಮ ವಿಚಾರಿಸಿದಿರಿ. ಒಂದೆರಡು ತಿಂಗಳ ರಜೆಯ ದಿನಗಳಲ್ಲಿ ಅವನ ಹತ್ತಿರ ಇರುವುದಾಯಿತು. ಹೀಗೆ ಅನೇಕಸಲ ನೀವು ಹೆಚ್ಚಿನ ಸಲುಗೆಯಿಂದ ಅವನ ಮನೆಯಲ್ಲಿದ್ದಾಗ ಉಪಚಾರ, ಉಡುಗೊರೆ, ವೆಚ್ಚ ಎಲ್ಲವನ್ನೂ ಅವನು ನೋಡಿಕೊಂಡ. ನೀವು ಅವರ ಮನೆಯಲ್ಲಿ ಪ್ಪರಿ ತನ್ನ ಅಳಿಯನ ಮನೆಯಾಗುವುದೆಂದು ರಾಜಮ್ಮನ ಯೋಚನೆ; ತನ್ನ ಮಗಳಮೇಲಿನ ಮಮತೆಯಿಂದ ನಿಮ್ಮವರನ್ನು ಕಂಡರೆ ಅವಳಿಗೆ ಹೆಚ್ಚು ಸಿಟ್ಟು.

ಹೀಗೆ ಪಂಕಜಮ್ಮ ಮಾತು ಮುಗಿಸುವಹೊತ್ತಿಗೆ, ನನ್ನ ಚಿಕ್ಕಮ್ಮ, ತನಗೇನೋ. ಹೊಳೆಯಲು ಹೀಗೆ ಹೇಳಿದಳು.

.. .. ..

....ಇದು ಲೋಕದಲ್ಲಿ ನಡೆಯುವ ವ್ಯವಹಾರ. ಯಾರು ಬೇಡಾಂದರು!? ಅಲ್ಲಿಗೇ ನಿಲ್ಲಲಿಲ್ಲ ಆ ಮಹಾತ್ಮಳ ಕಥೆ. ನನ್ನ ಸೊಸೆ ಕಾಂತಂ ಬದುಕಿರುವ ವರೆಗೂ ಅವಳು ನಡಕೊಂಡ ರೀತಿ ನೋಡಿದರೆ ಬಲು ಕೆಟ್ಟಿಸಿಸುತ್ತದೆ. ಆ ವಿಷಯ ನನ್ನ ಸ್ವಂತ ಅನುಭವದ ಮಾತು. ಪಾಪ ಯಾವಾಗಲೂ ಮನೆಯಿಂದ ಹೊರಗೆ ಇರುವ ಸತ್ಯಂನಿಗೇನು ಗೊತ್ತು? ಅವನಿಗೆ ಯಾರು ಹೇಳಬೇಕು? ನಿಮ್ಮವರನ್ನು ಮನೆಗೆ ಸೇರಿಸಬಾರದೆಂದು ಗಂಡನಿಗೆ ಬೋಧಿಸಬೇಕೆಂದು ಮಗಳನ್ನು ಪೀಡಿಸಿದಳಂತೆ. ಆದರೆ ಅವಳು ಸತ್ಯಂನಿಗೆ ಹೇಳಿದಳೋ ಇಲ್ಲವೋ ಯಾರಿಗೆ ಗೊತ್ತು? ಏನು ಆವಳ ಸನ್ನಾಹ!? ಕೊನೆಗೆ ಅವಳ ಮಾತೇಗೆಲಿಯಿತು. ಭಗವಂತನು ನನ್ನ ಸೊಸೆಯನ್ನು ಕಣ್ಣುಮುಚ್ಚಿಸಿದ. ಈಗ ಆ ತಾಯಿಗೆ ಶಾಂತಿಯಾಗಿರಬೇಕು....? ಎಂದು ಚಿಕ್ಕಮ್ಮ ಕಣ್ಣಲ್ಲಿ ನೀರುತಂದಳು. ಅಲ್ಲಿಗೆ ಸುಮ್ಮನಿರದೆ ಪಂಕಜಮ್ಮ ತನ್ನ ಹೇಳಿಕೆಯನ್ನು ಮುಂದುವರಿಸಿದಳು.

o o o

....“ಅಹುದಮ್ಮಾ ಅಂದ್ರೆ; ರಾಜಮ್ಮನ ಬಾಯಿ ಒಳ್ಳೆಯದಲ್ಲವೆಂದು ಲೋಕವೇ ಆಡಿಕೊಳ್ಳುತ್ತಿದೆ. ಅವಳು ಅಂದಳೆಂದು ಇಂತಹ ವಿಪತ್ತುಂಟಾಗಬೇಕೇ? ಇದು ನಿನ್ನ ಮಗನ ಕರ್ಮ! ಮಕ್ಕಳ ದೌರ್ಭಾಗ್ಯ! ಅವಳ ಕೆಟ್ಟ ದೃಷ್ಟಿಯೇ ಇಂತಹ ನಗುನಗುತ್ತಲಿದ್ದ ಮನೆಗೆ ಈ ದುಃಖದ ಪರಂಪರೆ ಬಂದುಬಿಟ್ಟಿತು. ರುಕ್ಮಿಣಿಗೂ ಅಂತಹ ದೃಷ್ಟಿ ಏನಾದರೂ ತಾಕಿರಬೇಕು; ಅವಳ ಸ್ವಭಾವ ಯಾರಿಗೆಗೊತ್ತಿಲ್ಲ? ಇರಲಿ, ಸತ್ಯಂ ಏನೂ ಅಂದುಕೊಳ್ಳೋದಿಲ್ಲ.... ಆ ರುಕ್ಮಿಣಿಯ ಎರಡನೆಯ ಕಾಗದವನ್ನು ಪೂರ್ತಿ ಓದಿಬಿಡು” ಎಂದು ಹೇಳಿ ನನ್ನ ಕಡೆ ನೋಡಿದಳು. ನಾನು ಆ ಕಾಗದವನ್ನು ಓದಲಾರಂಭಿಸಿದೆ.

§ § §

“....ಅಪ್ಪಾ! ರಾಧಾಗೆ ಈಗ ಗುಣವಾಗಿದೆ ಎಲ್ಲರೂ ಸಂತೋಷದಲ್ಲಿರುವರು. ಆದರೆ ರಾಜಮ್ಮ ಮಾತ್ರ ಮುಖ ಯಾವಾಗಲೂ ಮುದುಡಿಕೊಂಡಿರುತ್ತಾಳೆ. ಒಂದು ಸಲವಾದರೂ ಇಂದಿನವರೆಗೆ ಜ್ವರದಿಂದ ಎದ್ದ ಹುಡುಗನನ್ನು ಹೇಗಿದ್ದೀಯಾ ಎಂದು

........ರುಕ್ಮಿಣಿಯಿಂದ ಪತ್ರ ಬಂದ ಮಾರನೆಯ ದಿನವೇ ಚಿಕ್ಕಮ್ಮ, ಶಾಸ್ತ್ರಿ, ಸುತೀಲ್ಲಿ, ಮತ್ತು ಕೈಕೂಸು ಇವರನ್ನು ಕರೆದುಕೊಂಡು ಊರಿಗೆ ಬಂದೇಬಿಟ್ಟಳು. "ಯಾಕೇ?" ಎಂದು ನಾನು ಕೇಳಿದೆ.

"ಛೀ, ಅವರ ಮನೇಲಿ ಒಂದುಘಳಿಗೆ ಕೂಡ ಇರಲು ನನಗೆ ಮನಸ್ಸಾಗಲಿಲ್ಲ. ಮಾತುಮಾತಿಗೂ "ನೀವು ಬೇಗ ಹೋಗ್ರಿ ಹಿಂದಿನಿಂದ ರುಕ್ಮಿಣಿ, ರಾಧಾ ಬರುತ್ತಾರೆ" ಎಂದು ಮನೆಯಿಂದ ಹೊರಗೆಹೋಗುವಂತೆ ಆಡಿದ ಚುಚ್ಚುಮಾತುಗಳನ್ನು ಕೇಳಿದಮೇಲೆಯೂ ಸಹ ಅಲ್ಲಿರಲು ನನಗೆ ಒಳ್ಳೆಸಲಿಲ್ಲ. ಕೂಡಲೇ ಹೊರಟುಬಂದೆ" ಎಂದಳು ಚಿಕ್ಕಮ್ಮ.

"ಅವರೆಂದು ಬರುತ್ತಾರಮ್ಮಾ?"

"ಎಂದು ಬರುವುದೇನು? ನಾಡದು ಶುಕ್ರವಾರ ಊನಸಿಗೆ ಅನ್ನಹಾಕುತ್ತಾರೆ; ನೀನು ಇವತ್ತು ಹೋಗು. ನಾಳೆ ಶುಕ್ರವಾರ ಅವರು ಅನ್ನಹಾಕುವರು; ತಡಮಾಡಿದರೆ, ನೀನೇ ಶನಿವಾರದ ದಿನ ಹಟಹಿಡಿದು ಊಟದ ಶಾಸ್ತ್ರ ಮುಗಿಸಿ ಅವನನ್ನು ಕರೆದುಕೊಂಡು ಬಂದುಬಿಡು." ಎಂದು ಪಟಪಟ ನುಡಿದುಬಿಟ್ಟಳು.

ನಾನು ಊರಿಗೆ ಹೋಗಬೇಕೆಂದು ನಿಶ್ಚಯಿಸಿದೆ. ಅಂದು ಸಂತೆಪೇಟೆಗೆ ಹೋಗಿ ಹೊಸಾ ಸೀರೆಗಳೆರಡನ್ನು ಕೊಂಡುಕೊಂಡೆ. ರುಕ್ಮಿಣಿಗೆ ಸೀರೆಗಳಮೇಲೆ ಬಲು ಆಸೆ. ಹೊಸ ಸೀರೆಯನ್ನು ಉಟ್ಟಾಗ ಅವಳನ್ನು ನೋಡಬೇಕು ಸಾಕ್ಷಾತ್ ಲಕ್ಷ್ಮೀದೇವಿ. ತ್ರಿಮೂರ್ತಿಗಳ ತಾಯಿಯಂತೆ ಕಾಣುವಳು. ಆದ್ದರಿಂದ ಎರಡು ಜರತಾರಿ ಸೀರೆಗಳನ್ನು ತಂದೆ. ಚಿಕ್ಕಮ್ಮ ಅವುಗಳನ್ನು ನೋಡಿ ಹಿಗ್ಗಿದಳು. ಅವರಮ್ಮನ ನೆನೆದು ಸೀರೆಯನ್ನುಡಬೇಕೆಂದು ರುಕ್ಮಿಣಿಗೆ ಹೇಳೆಂದು ಸೂಚಿಸಿದಳು.

ಮುಂದಿನ ಶುಕ್ರವಾರ ಸಂಜೆಗೆ ಊರಿಗೆ ಹೊರಡುವುದೆಂದು ನಿರ್ಧಾರ ಮಾಡಿದೆ. ಅಂದು ಶುಕ್ರವಾರ ಶಾಲೆಗೆ ಹೋಗಬೇಕೆಂದು ಅರಿವೆಗಳನ್ನು ಹಾಕಿಕೊಳ್ಳುತ್ತಿರುವಾಗ, ಶಾಲೆಯಿಂದ ಆಳುಮನುಷ್ಯ ಓಡಿಬಂದು 'ಮೇಷ್ಟ್ರೇ ನಿಮಗೊಂದು ಟೆಲಿಗ್ರಾಂ ಬಂದಿದೆ' ಎಂದು ಹೇಳಿದ. ಟೆಲಿಗ್ರಾಂ ತಂದ

ಮನುಷ್ಯ ಮನೆಯ ಬಾಗಿಲಲ್ಲಿ ನಿಂತಿದ್ದ. ಅವಸರವಸರದಿಂದ ಹೋಗಿ, ಅದನ್ನು ಇಸಿದುಕೊಂಡೆ. ಕೈಗಳು ನಡುಗತೊಡಗಿದವು; ಧಡಧಡಿಸುತ್ತ ಎದೆ ವೇಗವಾಗಿ ಹೊಡೆದುಕೊಳ್ಳಲು ಆರಂಭಿಸಿತು; ಕಣ್ಣು ಕತ್ತಲುಗಟ್ಟಿಸಿತು.

"ರುಕ್ಮಿಣಿಗೆ ವಿಪರೀತ ಜ್ವರ-ಭಯವೆನಿಸಿದೆ-ಹೊರಟುಬಾ" ಎಂದು ತಂತಿಯು ವಿವರಿಸಿತ್ತು. ಜ್ವರ ಸಾಮಾನ್ಯರೀತಿಯದಾಗಿರಲಿಕ್ಕಿಲ್ಲವೆಂದು ನಾನು ನೆನೆದೆ; ಆಕೆಯಿಂದ ಐದು ದಿನಗಳ ಹಿಂದೆ ಪತ್ರ ಬಂದಿತ್ತು. ಆಗೇನೂ ಜ್ವರದ ಮಾತೇ ಇರಲಿಲ್ಲ. ಏನೂ ತೋಚದಷ್ಟು ಯೋಚನೆ ನನ್ನನ್ನು ದುಃಖದಲ್ಲಿ ಕೆಡಹಿತು. ಧೈರ್ಯತಂದುಕೊಳ್ಳಬೇಕೆಂದು ಎಷ್ಟು ಯತ್ನಿಸಿದರೂ ನನಗೆ ಶಕ್ತಿ ಸಾಲದಂತಾಯಿತು. ನನ್ನ ಆಗಿನ ಅವಸ್ಥೆ ನೋಡಿ ಚಿಕ್ಕಮ್ಮ ಹೌಹಾರಿಹೋದಳು. ನೀವೆಲ್ಲರೂ ಒಂದೇಸವನೆ ನನ್ನ ಮುಖವನ್ನೇ ನೋಡುತ್ತ ನಿಂತುಕೊಂಡಿದ್ದಿರಿ.

ಚಿಕ್ಕಮ್ಮ ಕೊಂಚ ಧೈರ್ಯತಂದುಕೊಂಡು "ಅಲ್ಲಪ್ಪಾ! ಹೀಗೆ ಸುಮ್ಮನೆ ಕಲ್ಲುಗುಂಡಿನಂತೆ ನಿಂತರೇನು ಪ್ರಯೋಜನ? ಹತ್ತುಹೊಡೆಯಿತು. ಹನ್ನೊಂದಕ್ಕೆ ತೆನಾಲಿಗೆ ರೈಲಿದೆ" ಎಂದು ಎಚ್ಚರಿಸಿದಳು.

ಮೇಲಂಗಿಯನ್ನು (ಕೋಟು) ತೆಗೆದೊಗೆದು, ಒಂದು ಪಂಚೆಯನ್ನು ಹೆಗಲಮೇಲೆ ಹಾಕಿಕೊಂಡು, ಸಾಕಷ್ಟು ಹಣದಿಂದ ಸ್ಟೇಷನಿಗೆಂದು ಕುದುರೆ ಗಾಡಿಯನ್ನು ಹತ್ತಿಕುಳಿತೆ; ರೈಲು ಹೊರಡಲು ಸ್ವಲ್ಪೇ ಸಮಯವಿತ್ತು: ಟಿಕೇಟುತೆಗೆದುಕೊಂಡು ರೈಲು ಹತ್ತಿದೆ. ಕೊಂಚ ನೆಮ್ಮದಿ ಆಯಿತು. ರೈಲು ಗಾಡಿ ಹೊರಡುವಾಗ ನನ್ನೆದೆ ಗುಭೇಲೆಂದು ಹೊಡೆದುಕೊಂಡಿತು. ಮನಸ್ಸಿಗೆ ಸಮಾಧಾನವಿರಲಿಲ್ಲ. ಏನೇನೋ ಸುಟ್ಟ, ಹಾಳುಯೋಚನೆಗಳು ಹಾದುಹೋದವು. ರೈಲು ಅಂದೇಕೋ ಬಲು ಮೆಲ್ಲನೆ ಸಾಗುತ್ತಿದ್ದಂತೆ ತೋರಿತು.

ನನ್ನ ಮನಸ್ಸು ರೈಲಿಗಿಂತಲೂ ಬಲು ವೇಗವಾಗಿ ಓಡುತ್ತಿತ್ತು. ಹುಚ್ಚುಕಲ್ಪನೆಗಳು ನನ್ನ ತಲೆಸುತ್ತಲೂ ನೃತ್ಯಮಾಡತೊಡಗಿದವು. ಅವುಗಳಲ್ಲಿ ಕೆಲವು ಯೋಚನೆಗಳು ಸರಿಯಲ್ಲವೆಂದು ಮರೆತುಬಿಟ್ಟೆ. ಆ ಕೆಟ್ಟ

ಯೋಚನೆಗಳನ್ನು ಮರೆಯಲು ಯತ್ನಿಸಿದೆನು. ಆದರೆ ಅವು ಮತ್ತೆ ಮತ್ತೆ ನನ್ನನ್ನು ಆವರಿಸುತ್ತಿದ್ದವು. ಆದರೆ ಆ ಘೋರ ದೃಶ್ಯಗಳು, ಜೀರ್ಣದೇಹಗಳು, ಕರಾಳ ಆಕೃತಿಗಳು, ದುರಂತ ಚಿತ್ರಗಳು, ಭೂತಪ್ರೇತಗಳು ನನ್ನ ಸುತ್ತ ಬಂದು ನರ್ತಿಸುವಂತೆನಿಸಿತು; ತಲೆ ಭಾರವಾಯಿತು; ಯೋಚನೆ ತಡೆಯಿತು.

ನನ್ನ ತಲೆಯಲ್ಲಿ ಶುಭ, ಅಶುಭ ಯೋಚನೆಗಳು ಹಾದುಹೋದವು. ಮತ್ತೆ ಮತ್ತೆ ಯೋಚಿಸಿದಂತೆಲ್ಲ, ಏನೂ ಹೊಳೆಯುತ್ತಿರಲಿಲ್ಲ; ಮೌನದಿಂದ ಕುಳಿತುಬಿಟ್ಟೆ. ನನ್ನ ಊಹಾಪೋಹಗಳಿಗೆ ಅಂತ್ಯವೇ ಇರಲಿಲ್ಲ.

ರುಕ್ಮಿಣಿ ಬಹಳ ಅಪಾಯಸ್ಥಿತಿಯಲ್ಲಿರುವಳೆಂದೆನಿಸಿತು. ಇರಲಾರದು; ಅವಳಿಗೆ ಕೊಂಚ ಗುಣಮುಖವಾಗಿರಬೇಕೆಂದು ತೋರಿತು. ಕೇವಲ ಸ್ವಲ್ಪ ಜ್ವರ ಬಂದಿರಬಹುದು. ಇಷ್ಟೇಕೆ ಗಂಭೀರ ಯೋಚನೆಯೆಂದು ನನ್ನ ಮೂರ್ಖತನಕ್ಕೆ ಮನಸ್ಸಿನಲ್ಲಿಯೇ ನಕ್ಕುಬಿಟ್ಟೆ.

ರೈಲು ಹೇಗೆ ಮುಂದರಿಯಿತೋ ನನಗೆ ತಿಳಿಯದು. ಎಲ್ಲೆಲ್ಲಿ ನಿಂತಿತೋ ನನಗೆ ಅರಿವಿಲ್ಲ. ನಾನು ಕುಳಿತ ಡಬ್ಬಿಯಲ್ಲಿ ಯಾರಾರು ಹತ್ತಿದರು, ಇಳಿದರೆಂಬುದೂ ನನ್ನ ಗಮನಕ್ಕೆ ಬಂದಿರಲಿಲ್ಲ. ಮಾಮೂಲಿ ಮಂಕು ಬಡಿದವನಂತೆ ಕುಳಿತಿದ್ದೆ. ತೆನಾಲಿಯೆಂಬ ಮೂರಕ್ಷರವನ್ನೇ ಜಪಿಸುತ್ತ ಕುಳಿತಿದ್ದೆ. ತೆನಾಲಿ ರೈಲುನಿಲ್ದಾಣ ಬಂದಕೂಡಲೇ ನನಗೆ ಯಾರೋ ಬಡಿದೆಬ್ಬಿಸಿದಂತೆನಿಸಿತು. ಡಾಕ್ಟರ್ ಚಲಪತಿರಾಯರು ನನ್ನನ್ನು ಕಂಡರು. ಗಾಡಿ ಇಳಿದು ಅವರ ಹತ್ತಿರ ಹೋಗಿ "ಹೇಗಿದೆ ನಮ್ಮ ರುಕ್ಮಿಣಿಗೆ? ನೀವು ಯಾವಾಗ ಇಲ್ಲಿಗೆ ಬಂದಿರಿ?" ಎಂದು ಬಹಳ ಆತುರತೆಯಿಂದ ಕೇಳಿದೆ.

ಡಾಕ್ಟರರು ನನ್ನ ಭುಜದಮೇಲೆ ಕೈಯಿಟ್ಟು "ಗಾಬರಿಯಾಗಬೇಕಿಲ್ಲ, ನಾನು ನನ್ನ ಬೇರೇ ಕೆಲಸದ ಮೇಲೆ ಇಲ್ಲಿಗೆ ಬಂದಿದ್ದೆ; ಸತ್ಯಂ ನಿಮಗೆ ಟೆಲಿಗ್ರಾಂ ಕೊಟ್ಟಿರುವೆನೆಂದು ತಿಳಿಸಿದ; ನಿಮ್ಮನ್ನು ಕಂಡು ಮನೆಗೆ ಕರೆದು ಕೊಂಡು ಹೋಗೋಣವೆಂದು ಬಂದೆ; ಅವಳಿಗೇನೂ ಆಗಿಲ್ಲ. ಇವತ್ತು ಮುಂಜಾನೇ ಅಲ್ಲಿಗೆ ಹೋಗಿ ರೋಗಿಯನ್ನು ನೋಡಿಕೊಂಡು ಬಂದೆ;

ಅಷ್ಟೇನೂ ಭಯಬೀಳಬೇಕಾದ ವಿಷಯವಲ್ಲ. ಸಾಮಾನ್ಯ ಜ್ವರ; ನಾನು ಅವಳ ಹತ್ತಿರವೇ ಇದ್ದು ರೈಲು ಬರುವ ವೇಳೆ ಆಯಿತೆಂದು ತಿಳಿದು ಈಗ ಬಂದೆ” ಎಂದು ಹೇಳುತ್ತಲಿದ್ದ ಡಾಕ್ಟರನ ಮಾತುಗಳನ್ನು ಕೇಳುತ್ತ ದಾರಿ ನಡೆದೆವು. ಮನೆಗೆ ಹೋಗಿ ನೋಡಿದೆ; ರುಕ್ಮಿಣಿ ಮಂಚದ ಮೇಲೆ ಮಲಗಿದ್ದಾಳೆ. ಅವಳಿಗೆ ಜ್ವರ ಯಾವಾಗ ಬಂತೂ........ಎಂದು ನಾನು ಮಾತು ಮುಂದುವರಿಸುತ್ತಿರಲು, ನನ್ನ ಮಾತಿಗೆ ಪಂಕಜಮ್ಮ ಅಡ್ಡಬಂದು ಹೀಗೆ ಹೇಳಿದಳು.

o o o

“.......ಮಂಗಳವಾರವೇ! ಅಲ್ಲ, ಅಲ್ಲ. ಸೋಮವಾರವೇ ಅವಳಿಗೆ ಜ್ವರ ಬಂತು. ನಾನು ಅಲ್ಲೇ ಇದ್ದೆ; ಅಂದು ಅವಳು ಯಾರಮನೆಗೋ ವೀಳೇಕ್ಕೆ ಹೋಗಿದ್ದಳು. ಅವಳ ಚೆಲುವಿಗೆ ಯಾರ ದೃಷ್ಟಿ ತಾಕಿತೋ ತಿಳಿಯದು. ಅರಿಷಿಣಕುಂಕುಮಕ್ಕೆ ಹೋದವಳು ನರಳುತ್ತಲೇ ಬಂದಳು. ವಿಪರೀತ ಜ್ವರ; ದೃಷ್ಟಿ ನಾನೇ ತೆಗೆದುಹಾಕಿದೆ. ಏನುಮಾಡಿದರೇನು? ಜ್ವರ ಕಡಮೆಯಾಗಲೇ ಇಲ್ಲ ........ ಸತ್ಯಂ ನಿಂತಲ್ಲೇ ಸಿರ್ವಿಣ್ಣನಾದ. ಪಾಪ ಅವನ ಮುಖದಲ್ಲಿ ಕಳೆಯೇ ಇರಲಿಲ್ಲ” ಎಂದು ಆವಳು ವಿಷಯದ ವಿವರವನ್ನು ಹೇಳುತ್ತ ಸುಮ್ಮನಾದಳು. ಆ ಎಳೆಯನೆತ್ತಿಕೊಂಡು ಕುತೂಹಲದಿಂದ ಡಾಕ್ಟರರು ಹೀಗೆ ಹೇಳತೊಡಗಿದರು.

“....ನಿಜ, ನಿಜ. ಸತ್ಯಂ ಬಹಳ ಗಾಬರಿಗೊಂಡಿದ್ದ. ಅವನ ಭಯ ಮತ್ತೊಂದು ರೀತಿಯದು. ತಮ್ಮನಿಗೆ ಟೈಫಾಯಿಡ್ ಜ್ವರ; ಅದು ಸಾಂಕ್ರಾಮಿಕ ರೋಗ, ಇನಾಕ್ಯುಲೇಷನ್ ಮಾಡಿಸಿರಿ ಎಂದು ಮನೆಯಲ್ಲಿ ಹೇಳಿದೆ; ಆದರಂತೆ ಮನೆಯಲ್ಲಿ ಎಲ್ಲರಿಗೂ ಇಂಜೆಕ್ಷನ್ ನಾನೇ ಚುಚ್ಚಿದೆ. ಅಂದು ಶುಕ್ರವಾರ ರುಕ್ಮಿಣಿಯು ದೇವಿಯ ಪೂಜೆ ಕಾರ್ಯವಿದೆ; ಪೂಜೆ ಒಂದು ಗಂಟೆ ಸಮಯ ಶ್ರದ್ಧೆಯಿಂದ ನಡೆಯಬೇಕು; ಮಾರನೆಯ ದಿನ ಶನಿವಾರ ಆಗಲಿ ಎಂದು ಹೇಳಿದ ರುಕ್ಮಿಣಿಯ ಮಾತಿಗೆ ನಾನೂ ಸುಮ್ಮನಾದೆ. ಆನಂತರ ಅವಸರ, ಗಡಿಬಿಡಿಯಲ್ಲಿ ಅವಳಿಗೆ ಸೂಜಿ ಚುಚ್ಚುವುದನ್ನು ಮರತೇಬಿಟ್ಟೆ; ಸತ್ಯಂ ಸಹಿತ ನೆನಪು ಮಾಡಲಿಲ್ಲ. ಇದಾದ ಒಂದು ವಾರ

ದೊಳಗಾಗಿ ಹೀಗಾಯಿತು. ಇದು ನನ್ನ ಅಜಾಗರೂಕತೆಯಿಂದು ನಾನೇ ಮರುಗಿದೆ. ಅವಳ ದೇವಿಯ ಪೂಜೆ ಇವಳ ಆರೋಗ್ಯಕ್ಕೆ ಅಷ್ಟುಬಂತೇ ಯೆಂದು ನಾನು ಸುಮ್ಮನೆ ಚಿಂತಿಗೊಳಗಾದೆ. ಬಂದ ಜ್ವರ ಸ್ವಲ್ಪ ಬೇರೆ ರೀತಿಯದಾಗಿದ್ದರೆ ಒಳಿತಾಗುತ್ತಿತ್ತು. ಆದರೆ, ಒಮ್ಮಿಂದೊಮ್ಮೆಲೆ ಸೂರಾ ಇದಕ್ಕೇ ಏರಬೇಕೆ? ಇದು ಅವಳ ದುರದೃಷ್ಟವೆನ್ನಬೇಕೆ ? ಹೀಗೆ ಎಲ್ಲ ಗ್ರಹ ಚಾರ ಗಂಟುಬಿದ್ದರೆ ಮಾಡುವುದೇನು?

ಅನಂತರ ಸತ್ಯಂ ನನ್ನ ಮುಂದೆ ಈ ಮಾತು ನೆನಪುಮಾಡಿಕೊಂಡು ಸುಮ್ಮನೆ ರೋದಿಸಿದ. "ನಾವಾಗಿಯೇ ಅವಳಿಗೆ ಈ ಬೇನೆ ಬರುವುದಕ್ಕೆ ಕಾರಣವಾದೆವೆಂದು ಹಂಬಲಿಸಿದ. ತಮ್ಮನಾದ ರಾಧಾಕೃಷ್ಣಗೆ ಮಾಡಿದ ಸೇವೆಗೆ, ಆರೈಕೆಗೆ, ಹೋಗುವ ಪ್ರಾಣವನ್ನು ಉಳಿಸಿದ ಉಪಕಾರಕ್ಕೆ ಈ ಬಗೆಯ ಪರಿಹಾರವೇ? ಅವಳಿಗೆಷ್ಟು ಶ್ರದ್ಧೆ? ರೋಗಿಯ ವಿಷಯದಲ್ಲಿ ಅವಳು ತೋರಿದ ಮಮತೆ ಎಷ್ಟು? ಹೀಗೆ ಆರೈಕೆಯಲ್ಲಿ ಸೋತುಹೋದ ಇವಳಿಗೆ ಈ ಬಗೆಯ ಜ್ವರ ಬರುವುದು ಒಳಿತಲ್ಲ. ಇಂತಹ ಹೆಚ್ಚಿನ ಜ್ವರದ ತಾಪವನ್ನು ತಾಳುವ ಶಕ್ತಿ ಅವಳಲ್ಲಿ ಇರಲಿಲ್ಲ" ಎಂದು ಅನೇಕ ವಿಧವಲ್ಲಿ ಸತ್ಯಂ ಪೇಚಾಡಿದ. ಅವನ ಸಂಕಟವನ್ನು ನೋಡುವಂತಿರಲಿಲ್ಲ....ಎಂದು ಡಾಕ್ಟರು ತಮ್ಮ ಮಾತನ್ನು ಮುಗಿಸಲು, ಸತ್ಯಂ ಮುಂದೆಬಂದು, ಅನಂತರ ನಡೆದ ವಿವರವನ್ನು ತನ್ನ ಮಾತಿನಲ್ಲೇ ಹೀಗೆ ಹೇಳಿದ.

"....ನಾಲ್ಕು ದಿನ ನಾನೇ ಸ್ವಂತ ಔಷಧ ಕೊಟ್ಟೆ. ಜ್ವರ ಕಡಮೆ ಯಾಗದಿರಲು ನನಗೆ ಅಧೈರ್ಯವಾಗಲು ಐದನೆಯ ದಿನ ಹೊಟ್ಟೆನೋವು ಬೇರೆ ಕಾಣಿಸಿಕೊಂಡಿತು. ಪರೀಕ್ಷೆ ಮಾಡಲಾಗಿ ಲಂಗ್ಸ್‌ಗಳಲ್ಲಿ ನೀರ್ಬಲಿಕೆ ಕಂಡುಬಂತು. ಅವುಗಳಲ್ಲಿ ಉಂಟಾದ ಈ ನೀರವತೆಯಿಂದ ನಿಮೋನಿ ಯಾಕ್ಕೆ ಈ ಬೇನೆ ಬದಲಿಸಿದೆಯೆಂದು ನಾನು ನಿರ್ಧರಿಸಿ ನಾನು ಔಷಧ ಮಾಡುವುದನ್ನು ನಿಲ್ಲಿಸಿ, ಡಾಕ್ಟರ್ ರಾಮರಾಯರನ್ನೂ, ಉಳ್ಳಿಸ್ತಿಯವ ರನ್ನೂ ಕರೆತಂದು ತೋರಿಸಿದೆ. ಅವರು ಅನುಭವಸ್ಥರು, ಹೆಚ್ಚು ರೋಗಿ ಗಳನ್ನು ಕಂಡವರೆಂದು ಅವರಿಗೆ ತೋರಿಸಿದೆ. ಆದರೆ ಅವರ ನಿರ್ಣಯ

ದುರ್ದೈವದಿಂದ ಬೇರೆ ರೀತಿಯದಾಗಿ, ನಿರೋಪಿಸಿದಾಕ್ಷೆ ಔಷಧವೇ ನಡೆಯ ಲಿಲ್ಲ. ಮಲೇರಿಯಾಯೆಂದು ಇಬ್ಬರೂ ನಿರ್ಧರಿಸಿ ಮುಂದೆ ನಾಲ್ಕು ದಿನ ಔಷಧ ಕೊಟ್ಟರು. ಅವರು ತಮ್ಮ ತಮ್ಮೊಳಗೆ ಚರ್ಚೆಮಾಡಿ ಬಂದ ನಿರ್ಣ ಯಕ್ಕೆ ನಾನು ಬಡಲು ಹೇಳುವುದು ನ್ಯಾಯುವೆನಿಸುವದಿಲ್ಲವೆಂದು ತಿಳಿದೆ. ಅವರ ಪ್ರಸಿದ್ಧ ಅನುಭವ, ಲೋಕಕೀರ್ತಿ, ಇವರ ವಿಷಯದಲ್ಲಿ ಈ ಬಗೆಯ ನಿರ್ಣಯಕ್ಕೆ ಬರಲು ವಿಧಿಯೇ ಕಾರಣವೆಂದು ನಾನು ನೆನೆದೆ........"ಎಂದು ಸತ್ಯಂ ತಲೆತಗ್ಗಿಸಿದ; ಮುಂದೆ ಮಾತನಾಡಲಿಲ್ಲ; ಅನಂತರ ಮುಂದಿನ ಕತೆ ಯನ್ನು ನಾನೇ ವಿವರಿಸಿದೆ.

.ನಾನು ತೆನಾಲಿಗೆ ಸೇರುವ ಹೊತ್ತಿಗೆ ಅವಳಿಗೆ ಜ್ವರ ಬಹಳ ಹೆಚ್ಚಿಹೋಗಿತ್ತು. ಅವಳು ಮಂಚದ ಮೇಲೆ ಮಲಗಿದ್ದಳು. ಅವಳ ಹಣೆಯ ಮೇಲೆ ಬಿಳಿಯ ಅರಿವೆಯನ್ನು ಹಾಕಿ, ಅದರಮೇಲೆ ಮಂಜನ್ನು ಹಾಕಿದ್ದರು. ಅವಳ ಅವಸ್ಥೆ ಬಲು ಶೋಚನೀಯವಾಗಿತ್ತು. ಕಾಂಪೊಂಡರು ಅವಳ ಮುಖದಮೇಲಿನ ನೀರನ್ನು ಆಗಿಂದಾಗ್ಯೆ ಒರಿಸುತ್ತಿದ್ದನು. ಸತ್ಯಂ ಅವಳ ಮೈಯನ್ನು ಸ್ಪಂಜಿನಿಂದ ಮೇಲಿಂದಮೇಲೆ ಒರಸುತ್ತಿದ್ದನು. ಸತ್ಯಂನ ಮುಖವೆಲ್ಲ ಬಾಡಿ ಕಂದಿ ಹೋಗಿತ್ತು. ಮಹಾಪರಾಧವನ್ನು ಮಾಡಿದವ ನಂತೆ ಅವನು ಗಾಬರಿಗೊಂಡಿದ್ದನು. ನಾನು ಮನೆಯಲ್ಲಿ ಕಾಲಿಟ್ಟಕೂಡಲೇ ಅವನು ಬೆದರಿದನು. ನಾನು ಬರುವೆನೆಂದು ತಿಳಿದಿದ್ದರೂ, ಅವನನ್ನು ವಿಚಿತ್ರವಾದ ಭೀತಿ ಆವರಿಸಿತ್ತು. ಅವನು ನನ್ನನ್ನು ಕಂಡು ಅಳುವುದೊಂದೇ ಉಳಿದಿತ್ತು. ನನಗೂ ಬಲು ಕೆಡಕೆನಿಸಿತು; ನನ್ನ ಕೈಕಾಲುಗಳು ತತ್ತರಿ ಸುತ್ತಿದ್ದವು. ನಿರ್ವಾಹವಿಲ್ಲದೆ ಅಲ್ಲೇ ಬಾಗಿಲಲ್ಲಿ ಇಟ್ಟ ನೀರಿನಿಂದ ಕಾಲು ತೊಳೆದುಕೊಂಡು ಮಂಚದಕಡೆ ಹೊರಟೆ.

ಮನೆಯವರೆಲ್ಲರೂ ನನ್ನನ್ನು ಕಂಡು ಸಂತೈಸುವ ನೋಟವನ್ನು ಬೀರಿ ದರು. ಅವರ ದೈನ್ಯದ ನೋಟ ನನ್ನನ್ನು ಹಣ್ಣಾಗಿಸಿತು. ರಾಜಮ್ಮ ಮಾತ್ರ ನನ್ನನ್ನು ಕಂಡು ಮುಖ ಮುದುಡಿಕೊಂಡಳು. ಮಿಕ್ಕವರೆಲ್ಲರೂ ನನ್ನ ಬರುವಿಕೆಯನ್ನು ಸ್ವಾಗತಿಸಿದರು. ಆದರೆ ಇವಳೇಕೆ ನಮ್ಮ ಮೇಲೆ

ಇಷ್ಟು ವಿಷಕಾರುತ್ತಿರುವಳೋಯೆಂಬುದು ತಿಳಿಯದಾಯಿತು. ನಾವೇನು ಅಂತಹ ಅಪರಾಧ ಮಾಡಿದೆವೋ ತಿಳಿಯದು. ಅವಳ ಬಾಯಿಂದ ಒಂದು ಒಳ್ಳೇಮಾತು ಬರಲಿಲ್ಲ; ಮನೆಯಲ್ಲಿ ಕ್ಷೇಮಸಮಾಚಾರ ವಿಚಾರಿಸಲಿಲ್ಲ; ರುಕ್ಮಿಣಿಯ ಬೇನೆಯ ಬಗ್ಗೆ ಒಂದು ಸಹಾನುಭೂತಿಯ ಪ್ರೇಮದ ಮಾತು ಆಡಲಿಲ್ಲ; ನಾನು ಬಂದೆನಲ್ಲವೆಂದು ಸಮಾಧಾನದ ಚಿಹ್ನೆಯನ್ನಾದರೂ ಅವಳ ಮುಖದ ಮೇಲೆ ಕಾಣಲಿಲ್ಲ. ಇದೊಂದೇ ನನ್ನನ್ನು ಬಲು ನೋಯಿಸಿತು.

ಅವಳು ಬಾಗಿಲಕಡೆ ನೋಡುತ್ತ ಸುಮ್ಮನೇ ನಿಂದಿದ್ದಳು. ಅವಳು ನಮ್ಮ ಮನೆತನಕ್ಕೆ ಅಂಟಿಕೊಂಡ ಶನಿಯೆಂದು ನನಗೆನಿಸಿತು. ಆದರೆ ಅವಳನ್ನೇ ನೋಡುತ್ತ ಹುಚ್ಚನಂತೆ ನಿಂತುಬಿಟ್ಟೆ. ಕಣ್ಣಲ್ಲಿ ನೀರು ಧಾರೆಯಾಗಿ ಹರಿಯುತ್ತಿತ್ತು. ಹುಚ್ಚನಂತೆ ನಿಂತ ನನ್ನನ್ನು ಕಂಡು ಆ ಮಹರಾಯಿತಿ ಏಕೆ ಇಷ್ಟು ದುಃಖ! ಏನೋ ಸ್ವಲ್ಪ ಜ್ವರ ಬಂದಿದೆ; ಇಷ್ಟೇಕೆ ಸಂತಾಪ? ಅವಳಿಗೇನಾಗಿದೆ? ಸುಖವಾಗಿ ಮಂಚದ ಮೇಲೆ ರಾಣಿಯಂತೆ ಮಲಗಿರುವಳು. ಉಪಚಾರ ಮಾಡುವವರಿದ್ದಾರೆ; ನೀವೂ ಬಂದುಬಿಟ್ಟಿರಿ. ಪಾಪ ನಮ್ಮವರು ಇಷ್ಟುದಿನ ಕಷ್ಟಪಟ್ಟು ಸೋತುಹೋಗಿದ್ದಾರೆ; ನಮ್ಮ ಅವಸ್ಥೆ ನೋಡುವವರೇ ಇಲ್ಲ. ಯಾಕೆ ಸುಮ್ಮನೇ ಅ ಕಾ ರ ಣ ವಾ ಗಿ ಸೋತುಹೋಗಿರುವಿರಿ. ಈ ಕಣ್ಣೀರೇಕೆ? ಸಂಜೆ ಹೊತ್ತಿನಲ್ಲಿ ಅಮಂಗಳಕರ ಸುಮ್ಮನಾಗಿರಿ ಸಾಕು” ಎಂದು ದಯೆ ದಾಕ್ಷಿಣ್ಯ ಇಲ್ಲದೆ ಆಡಿದ ಇವಳ ಮಾತುಗಳು ಶೂಲದಂತೆ ನನ್ನನ್ನು ಇರಿದವು. ಈ ಮಾತುಗಳು ಮಂಚದ ಮೇಲೆ ಮಲಗಿದ ರುಕ್ಮಿಣಿಗೆ ನೋವನ್ನುಂಟುಮಾಡಿರಬೇಕು.

ನಿರ್ವಾಹವಿಲ್ಲದೆ ಈ ಎಲ್ಲ ಚುಚ್ಚುಮಾತುಗಳನ್ನು ಸಹಿಸಿಕೊಂಡೆ. ನನ್ನ ಸ್ವಂತಮನೆಯಲ್ಲೇ ಆಗಿದ್ದರೆ ಏನು ಮಾಡುತ್ತಿದ್ದೆನೋ ತಿಳಿಯದು. ‘ರಾಣಿಯಂತೆ ಉಪಚಾರ ಮಾಡಿಸಿಕೊಂಡು ಮಲಗಿರುವಳು’ ಎಂಬ ಆ ಪಿಶಾಚಿಯ ಮಾತುಗಳು ನನ್ನನ್ನು ಹೆಚ್ಚು ನೋಯಿಸಿದವು. ನನ್ನ ಮುಖದಿಂದ ‘‘ರಾಣಿಯಂತೆ........’’ ಎಂಬ ಮಾತುಗಳು ತಾವಾಗಿಯೇ ಹೊರಬಂದವು. ಆ ನನ್ನ ಬಿರುಸು ಮಾರುತ್ತರಕ್ಕೆ ಅವಳು ನನ್ನನ್ನು ದುರದುರನೆ

ನೋಡುತ್ತ 'ಯಾರಿಗೆ ಗೊತ್ತು ಮಹಾರಾಯಾ' ಎಂದು ನುಡಿದು ಹೋಗಿ ಬಿಟ್ಟಳು. ರುಕ್ಮಿಣಿ ಅತಿ ದೀನಳಾಗಿ, ಬಹಳ ನೊಂದಮುಖದಿಂದ, ನಾನು ನಿಂತಕಡೆ ನೋಡುತ್ತ ಮಲಗಿದ್ದಳು. ಸತ್ಯಂ ನ ಆಗಿನ ಸ್ಥಿತಿ ಅತಿ ಶೋಚನೀಯವಾಗಿತ್ತು.

ಅನಂತರ ಆ ಮಹಾತಾಯಿ ಅಲ್ಲಿಗೇ ಸುಮ್ಮನಾಗಲಿಲ್ಲ. ಅಳಿಯನನ್ನು ಒಳಗೆ ಕರೆದು ನಮಗೆಲ್ಲ ಕೇಳುವಂತೆ "ರಾತ್ರಿ ಪೂರ್ತಿ ನೀವು ನಿದ್ದೆ ಮಾಡಿಲ್ಲ; ನಿಮಗೇನು ಈ ಹುಚ್ಚು; ಇನ್ನೇನು ಅವಳ ತಂದೆ ಬಂದಾನಲ್ಲ; ಸ್ವಲ್ಪ ವಿಶ್ರಾಂತಿಪಡೆಯಿರಿ. ಇಲ್ಲವಾದರೆ ನೀವೂ ಮಂಚ ಹಿಡಿಯಬೇಕಾದೀತು" ಎಂದು ಒದರಿಕೊಂಡಳು.

ಸತ್ಯಂ ಮತ್ತೆ ಬಂದು ನನ್ನಕಡೆ ನೋಡಿದ. ಅವನಿಗೆ ಸಮಾಧಾನವಾಗಲೆಂದು 'ಸತ್ಯಂ ನೀನು ಒಳಗೆ ಹೋಗಿ ಅಡ್ಡಾಗು ನಾನಿದ್ದೇನೆ. ನಿನಗೇಕೆ ಯೋಚನೆ' ಎಂದು ಹೇಳಿದೆ. ಅವನು ಸ್ಪಂಜಿನಿಂದ ರೋಗಿಯು ಮೈಯ್ಯನ್ನು ಹೇಗೆ ಸ್ವಚ್ಛ ಮಾಡಬೇಕೆಂಬುದನ್ನು ಸೂಚಿಸಿ ಹೊರಟು ಹೋದ. ಕೋಣೆಯಲ್ಲಿ ಪಿಸು ಪಿಸು ಮಾತುಗಳು ನಡೆದು ಎಲ್ಲವೂ ಶಾಂತವಾಯಿತು. ಅನಂತರ ಕಾಂಪೊಂಡರ್ 'ಸ್ವಾಮೀ ನಾನೂ ಆಸ್ಪತ್ರಿಗೆ ಹೋಗಬೇಕು ರೋಗಿಗಳು ಬರುತ್ತಾರೆ' ಎಂದು ಹೇಳಿ ಅವನೂ ಹೋದ. ಅಲ್ಲಿ ನಾವಿಬ್ಬರೇ ಉಳಿದೆವು.

ಅಲ್ಲಿಯವರೆಗೆ ಕಣ್ಣುಮುಚ್ಚಿ ಮಲಗಿದ ನನ್ನ ರುಕ್ಮಿಣಿ ಕೊಂಚವಾಗಿ ಕಣ್ಣುತೆರೆದಳು. ನಾನೊಬ್ಬನೇ ಇದ್ದುದನ್ನು ಕಂಡು ಸಂತೋಷಗೊಂಡು "ಅಪ್ಪಾ ಆ ಮುದುಕಿಯ ಮಾತೇ ಹಾಗೆ. ನೀವು ಬೇಸರಪಟ್ಟುಕೊಳ್ಳಬೇಡಿ. ಅವಳ ಮಾತಿಗೆ ಎದುರು ಹೇಳಬೇಡಿ. ಈ ಹಾಳು ಬೇನೆ ಕೊಂಚ ಸುಧಾರಿಸುವವರೆಗೆ ಏನೆಂದರೂ ಸುಮ್ಮನೇ ತಾಳಿಕೊಂಡು ಹೋಗೋಣ" ಎಂದು ನನಗೆ ಸಮಾಧಾನ ಹೇಳಿದಳು. ಸರಿಯೆಂದು ನಾನು ತಲೆಹಾಕಿದೆ. ಅವಳ ಮಾತಿನಲ್ಲಿ ಸತ್ಯಾಂಶವಿತ್ತೆಂದು ನನಗೆನಿಸಿತು.

ರುಕ್ಮಿಣಿ ಆ ಕಡೆ ನೋಡಿ, ಯಾರೂ ಇಲ್ಲವೆಂದು ತಿಳಿದುಕೊಂಡು, ಸವಿಮಾತಿನಲ್ಲಿ ರಹಸ್ಯವಾಗಿ "ರಾಜನನ್ನು ಬಲು ಕಷ್ಟನಳ್ಳ, ಅಪ್ಪಾ,

ನಮ್ಮನ್ನು ಕಂಡರೆ ವಿಷಕಾರುತ್ತಾಳೆ. ಮೊನ್ನೆ ಹದಿನಾರನೇ ದಿನದ ನಾಗೋಲಿ ಮಾಡಿದಾಗ ಮಾವ ಬಹಳ ಹೂ ತಂದಿದ್ದ. ಅತ್ತೆಗೆ ಮಾತ್ರ ಹೆಚ್ಚು ಹೂ ಕೊಟ್ಟು ನನಗೆ ನಾಕೇ ನಾಲ್ಕು ಮುಡಿಸಿದರು. ಹೆಚ್ಚಿನ ಹೂ ಪಕ್ಕದಮನೆ ಸುಂದರಮ್ಮಗೆ ಕೊಟ್ಟಳೆ ವಿನಾ, ನನಗೆ ಕೊಡುವ ಮನಸ್ಸಾಗಲಿಲ್ಲ" ಎಂದು ಹೇಳುವಾಗ ತಬ್ಬಲಿಯಾದ ಆಕಳು ಕರು ವಿನಂತಿತ್ತು ಅವಳ ಮುಖಲಕ್ಷಣ. ತಾಯಿಯ ಹೊಟ್ಟೆಯಲ್ಲಿ ಹಾಲಿಲ್ಲ ವೆಂದು ತಿಳಿದೂ, ಹೆತ್ತ ಆಕಳು ಕಡೆ ದೈನ್ಯದಿಂದ ನೋಡುವ ಆಕಳ ಕರುವಿ ನಂತೆ 'ರುಕ್ಕು' ನನ್ನಕಡೆ ನೋಡಿದಳು; ನನ್ನೆದೆ ನೀರಾಯಿತು. ಅವಳಿಗೆ ಸಾಕಷ್ಟು ಹೂ ತಂದು ಮುಡಿಸುವ ಶಕ್ತಿ ದೇವರು ನನಗಿತ್ತಿರುವನು. ಆದರೆ ತಾಯಿಯನ್ನು ಕಳೆದುಕೊಂಡ, ಆ ಮಮತೆಯ ತೆರವಾದ ಸ್ಥಾನವನ್ನು ತುಂಬುವುದಾದರೂ ಹೇಗೆ? ಅದು ಯಾವಾಗಲೂ ಬರಿದೇ.

''ತಾಯೀ, ಹೂವಿಗಾಗಿ ಏಕಮ್ಮ ಇಷ್ಟು ಯೋಚನೆ?" ಎಂದು ಸಮಾಧಾನದ ಮಾತು ನಾನು ಹೇಳಿದೆ.

"ಅದಕ್ಕಲ್ಲಪ್ಪಾ. ಸುಮ್ಮನೇ ನಡೆದ ವಿಷಯ ಮಾತ್ರ ನಿನಗೆ ಹೇಳಿದೆ." ಎಂದು ಹೇಳಿದಾಗ ಅವಳು ತನ್ನ ಹೆತ್ತತಾಯಿಯನ್ನು ನೆನೆದಳೆಂಬುದು ಮಾತ್ರ ಅವಳ ನೊಂದಮುಖ ಹೇಳುತ್ತಿತ್ತು. ತನಗೆ ತಾನೇ ನನ್ನ ಕಣ್ಣಲ್ಲಿ ನೀರು ಕಾಣಿಸಿಕೊಂಡಿತು.

ರುಕ್ಮಿಣಿ ಇದನ್ನು ಕಂಡು ನನ್ನ ಹೃದಯ ವೇದನೆಯ ಆಳವನ್ನು ತಿಳಿದು ಆ ಮಾತು ಈ ಮಾತು ಆಡಲಾರಂಭಿಸಿದಳು. "ಸಂಬಳ ಬಂತೆ? ಕೊಡು ವವರಿಗೆಲ್ಲ ಕೊಟ್ಟುಬಿಟ್ಟಿರುವಿರಾ? ಇಲ್ಲಿಗೇನಾದರೂ ಹಣ ತಂದಿರುವಿ ರೇನು?" ಎಂದಳು. ನಾನು ಎಲ್ಲವನ್ನು ಹೇಳಿ ''ಹತ್ತು ರೂಪಾಯಿ ಮಾತ್ರ ತಂದಿರುವೆನಮ್ಮಾ'' ಎಂದು ಹೇಳಿದೆ.

ಆ ಹತ್ತು ರೂಪಾಯಿ ನೋಟನ್ನು ತನಗೆ ಬೇಕೆಂದು ಕೇಳಿದಳು. ಆದನ್ನು ತೆಗೆದುಕೊಂಡು ತನ್ನ ಪೆಟ್ಟಿಗೆಯಲ್ಲಿಡಬೇಕೆಂದು ಕೊರಳೊಳಗಿಂದ ಕೀಲಿಕೈ ತೆಗೆದುಕೊಟ್ಟಳು. ಹಣವನ್ನು ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿ ಕೀಲಿಕೈ ಅವಳಿಗೆ ಕೊಟ್ಟೆ.

ಊರಲ್ಲಿ ಕೊಡಬೇಕಾದವರಿಗೆ ಎಲ್ಲರಿಗೂ ಕೊಟ್ಟಿರುವೆನೋ ಇಲ್ಲವೋ ಎಂಬುದನ್ನು ಕೇಳಿಕೊಂಡಳು. ಹಾಲಿನವಳ ಲೆಕ್ಕ ಬಗೆಹರಿಸುವುದು ರುಕ್ಮಿಣಿಗಲ್ಲದೆ ಮತ್ತಾರಿಗೂ ಆಗುತ್ತಿರಲಿಲ್ಲ. ಅವಳಿಗೆ ಸರಿಯಾದ ಹಣವನ್ನು ಕೊಟ್ಟಿರುವೆನೆಂದು ತಿಳಿದುಬಂದ ನಂತರ ಕೊಂಚ ಕಣ್ಣುಮುಚ್ಚಿಕೊಂಡು ಮಲಗಿದಳು. ವಯಸ್ಸು ಚಿಕ್ಕದಾದರೂ ಅವಳಿಗೆ ಮನೆಯ ವಿಚಾರದಲ್ಲೆಷ್ಟು ಶ್ರದ್ಧೆ? ಗಂಡನಮನೆಗೆ ಹೋಗಿದ್ದರೆ, ಸಂಸಾರವನ್ನೆಷ್ಟು ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು? ಆದರೆ ಅಂತಹ ಸುಖಪ್ರಸಂಗ ಈ ಹಾಳು ಜ್ವರ ಬಂದು ಕೆಡಿಸಿಬಿಟ್ಟಿತು. ನನಗೆ ಬಲು ಕೆಡುಕೆನಿಸಿತು. ಮುಂದೆ ಮಾತುಗಳೇ ಹೊರಡಲಿಲ್ಲ........ನಾನು ದುಃಖದಿಂದ ತಲೆಬಾಗಿದೆ. ಆನಂತರ ಸತ್ಯಂ ಮುಂದಿನ ವಿವರವನ್ನು ಹೇಳತೊಡಗಿದ.

........ಅವಳಿಗೆ ಬಂದ ಜ್ವರ ಸ್ವಲ್ಪಾದರೂ ಕಡಮೆಯಾಗಲೇ ಇಲ್ಲ. ಅವಳಿಗೆ ಬಂದ ಜ್ವರ ಟೈಫಾಯಿಡೆಂದು ಆನಂತರ ನಮಗೆ ತಿಳಿಯಿತು; ಮಲೇರಿಯಾ ಅಲ್ಲವೆಂಗು ನಿರ್ಣಯವಾದುದು ಎಲ್ಲವೂ....ಅವಳ ದುರದೃಷ್ಟವೆನ್ನಬೇಕು. ಜ್ವರ ಇಪ್ಪತ್ತು ಒಂದು ದಿನದ್ದೆಂದು ನೆನೆದಿದ್ದೆವು. ಆದರೆ ಅವಳ ಎದೆ ಮಾತ್ರ ಬಹಳ ನಿರ್ಬಲಗೊಂಡಿತ್ತು. ಇದೊಂದು ವಿಷಮಸ್ಥಿತಿಯೇ ಸರಿ. ಈ ಹೊಸಾ ಸಂಕಟದಿಂದ ನಮ್ಮನ್ನು ಪಾರುಮಾಡೆಂದು ದೇವರನ್ನು ಬೇಡುತ್ತಿದ್ದೆವು.

ಮೊದಲನೆಯ ವಾರ ಕಳೆದ ನಂತರ, ಅವಳಿಗೆ ಹೊಟ್ಟೆಶೂಲಿ ಆರಂಭವಾಯಿತು. ನನ್ನ ಯೋಚನೆ ಹೆಚ್ಚಿತು; ನನ್ನ ಡಾಕ್ಟರ್ ಮಿತ್ರನಾದ ಶಾಮರಾಯರಿಗೆ ಮತ್ತು ಉಳ್ಳಕ್ಕಿಯವರ ಆರೈಕೆಗೆ ರೋಗಿಯನ್ನು ಬಿಟ್ಟುಬಿಟ್ಟೆ. ಅವರದನ್ನು ನಿಮೋನಿಯಾ ಎಂದು ಉಪಚಾರಮಾಡತೊಡಗಿದರು. ಇದೊಂದು ಹೊಸ ತೊಡಕೆಂದು ನನ್ನೆದೆ ನೀರಾಯಿತು; ನಾನು ಹತ್ತಿರವೇ ಇದ್ದು ಔಷಧ ಉಪಚಾರ ಮಾಡುತ್ತಲಿದ್ದೆ. ಈ ಹೊಸಬಗೆಯ ಕಷ್ಟದ ಬೇನೆ ಇಂತಹ ಪರೋಕಾರಿ ಜೀವಿ, 'ರುಕ್ಕೂ'ಗೆ ಬರಬಾರದಾಗಿತ್ತು..."

ಎಂದು ಹೇಳಿ ಸತ್ಯಂ ಮುಂದೆ ಮಾತನಾಡದೆ ತಲೆಬಾಗಿ ಕುಳಿತ. ಅವನ ಕಣ್ಣುಗಳಲ್ಲಿ ನೀರೂರತೊಡಗಿತು.

ಪಂಕಜಮ್ಮ ಮುಂದಿನ ವಿಷಯವೇನೆಂಬುದನ್ನು ಹೇಳತೊಡಗಿದರು.

§ § §

........ಸತ್ಯಂ ರವರ ಉಪಚಾರದಲ್ಲಿ ಯಾವುದೇ ಕಡಮೆ ಇರಲಿಲ್ಲ. ಅವರು ನಿಜವಾಗಿಯೂ ಹುಚ್ಚು ಹಿಡಿದವರಂತೆ ವರ್ತಿಸತೊಡಗಿದರು. ತಮ್ಮ ಸ್ವಂತ ಆಸ್ಪತ್ರೆ ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿದರು....ಎಲ್ಲವನ್ನೂ ಅವರ ಕಾಂಪೋಂಡರೇ ನೋಡಿಕೊಳ್ಳುತ್ತಲಿದ್ದ. ಬೇಕಾದಾಗ ಅವನೇ ಸತ್ಯಂ ರನ್ನು ಕಂಡು ಸಲಹೆಯನ್ನು ಪಡೆದು ಹೋಗುತ್ತಿದ್ದ. ರೋಗಿಯ ವೈ, ಮುಖದ ಮೇಲೆ ನೊಣಗಳು ಕೂಡದಂತೆ ಗಾಳಿಬೀಸುವುದು, ಅರ್ಧ ಗಂಟೆಗೊಮ್ಮೆ ಪಾನೀಯ, ಔಷಧ ಕೊಡುವುದು, ಎಲ್ಲ ಆರೈಕೆಯ ಕಾರ್ಯ ವನ್ನು ತಾವೇ ಸ್ವಂತ ಮಾಡುತ್ತಲಿದ್ದರು. ಅವರು ಯಾರೊಂದಿಗೂ ಮಾತ ನಾಡುತ್ತಿರಲಿಲ್ಲ. ಮಧ್ಯಾಹ್ನದ ಸಮಯದಲ್ಲಿ ಮಾತ್ರ ಸ್ವಲ್ಪ ವಿಶ್ರಾಂತಿ ಪಡೆದು ನಿಮ್ಮ ತಂದೆಯವರನ್ನು ಕೂಡೆಂದು ಹೇಳುತ್ತಿದ್ದರು. ಆ ವಿಶ್ರಾಂತಿ ಬಹಳ ಸ್ವಲ್ಪ-ಒಂದು ಹದಿನೈದು ನಿಮಿಷ. 'ರುಕ್ಮೊ'ನ ಹಾಸಿಗೆಯನ್ನು ಸದಾ ಕಾಯುತ್ತ ಕುಳಿತಿರುವುದೇ ಅವರ ಕೆಲಸವಾಗಿತ್ತು.

'ರುಕ್ಮೊ'ಗೆ ಕೂಡ ಅದರ ಮೇಲೆ ಹೆಚ್ಚಿನ ಪ್ರೇಮ ಮತ್ತು ಪ್ರೇಮ ವನ್ನಿಟ್ಟುಕೊಂಡಿದ್ದಳು. ಏನು ಬೇಕಾದರೂ ಅವರನ್ನೇ ಕೇಳುತ್ತಿದ್ದಳು. ತಂದೆಯ ಹೆಸರನ್ನು ಎತ್ತುವುದನ್ನೇ ಮರೆತುಬಿಟ್ಟಿದ್ದಳು. ಇದರ ಕಾರಣ ನನಗೇನೂ ಹೊಳೆಯಲೇ ಇಲ್ಲ, ಕಡೆಯವರೆಗೆ.

ಮಾವಾ ಅದು ಬೇಕು; ಮಾವಾ ಹೊಟ್ಟೆಶೂಲೀ! ಮಾವಾ ಹಾಲು ಬೇಕು, ಏನು ಮಾಡಿದರೂ, ಏನು ಬೇಡಿದರೂ ಮಾವನಹೆಸರೇ ಮುಂದೆ. ತನಗೆಂದು ಗುಣವಾಗುವುದೆಂದು ದೈನ್ಯದಿಂದ ಕೇಳುತ್ತಿದ್ದಳು. "ಮಾವಾ ನಿನ್ನ ಕೈಗುಣ ಬಲು ಒಳ್ಳೇದು ಎಂದು ಹೇಳುತ್ತಾರೆ. ನೀನೇ ಔಷಧಕೊಟ್ಟು ನನ್ನ ರೋಗ ವಾಸಿಮಾಡೆಂದು" ಕೇಳಿಕೊಳ್ಳುತ್ತಿದ್ದಳು. "ಆಗುತ್ತದಮ್ಮ:

ಬೇಗ ಗುಣವಾಗುತ್ತದೆ. ಯಾಕೆ ಗಾಬರಿ ?" ಎಂದು ಅವಳ ಮುಖ ಸವರುತ್ತಿದ್ದರು ಸತ್ಯಂ. ಆದರೂ ಅವಳು ತನ್ನೆರಡು ಕೈಗಳನ್ನೂ ಮಾವನ ಭುಜಗಳ ಮೇಲೆ ಹಾಕಿ, ಅವರ ಮುಖಕ್ಕೆ ತನ್ನ ಮುಖವನ್ನೂ ನೀಡಿ 'ಮಾವಾ' ಎಂದು ಕಣ್ಣೀರಿಡುತ್ತಿದ್ದಳು. ಅವಳ ಹೃದಯದಲ್ಲಿಯ ಪ್ರೇಮದ ಆಳ ತಿಳಿಯುವುದೇ ಕಷ್ಟ.

ಎರಡನೇ ವಾರ ಮುಗಿಯುವುದರೊಳಗೆ ಅವಳ ರೋಗ ಹೆಚ್ಚುತೊಡಗಿತು. ಆಗಲೇ ಅಲ್ಲವೇ ಸಿಮ್ಮ, ಚಿಕ್ಕಮ್ಮ, ಹುಡುಗರೂ, ಎಲ್ಲರೂ, ಹೊರಟು ಬಂದುದು ? ಎಂದು ತನ್ನ ವರದಿಯನ್ನು ಮುಗಿಸುವುದರೊಳಗೆ ಈ ದುಃಖ ಕತೆಯ ಎಳೆಯನ್ನು ನನ್ನ ಚಿಕ್ಕಮ್ಮ ಆರಂಭಿಸಿದಳು.

o o o

"........ಸಿಮ್ಮ ತಂದೆ ಟೆಲಿಗ್ರಾಂ ಬಂತು. ನನಗೇನೂ ತೋಚಲಿಲ್ಲ. ಯಾವಾಗಲೂ ಅಲ್ಲಿಯ ಯೋಚನೆ ಮಾಡುತ್ತಿದ್ದ, ನಾನು ನಿರ್ವಾಹವಿಲ್ಲದೆ ಹೊರಡಲೇ ಬೇಕಾಯಿತು. ಆದರೆ ಸತ್ಯಂ ಅವರ ಮನೆಯಲ್ಲಿ ಬಿಡಾರ ಮಾಡದೆ ಹತ್ತಿರವೇ ಬೇರೊಂದು ಮನೆ ಮಾಡಿ, ಹುಡುಗರಿಗೆ ಈ ಅಂಟು ಬೇನೆ ಬರಬಾರದೆಂದು ಇದ್ದುಬಿಟ್ಟೆ. ಈ ವ್ಯವಸ್ಥೆ ಸತ್ಯಂನಿಗೆ ಸರಿಬೀಳಲಿಲ್ಲ. ಆದರೂ ನಾನೇ ಆತನನ್ನು ಸಮಾಧಾನಪಡಿಸಿದೆ. ಸರಿಯಾದ ಕಾರಣ ಹೇಳಿ ಸುಮ್ಮನಾಗಿಸಿದೆ. ನಾನು ಹೇಳಿದ ಕಾರಣ ಅವನಿಗೂ ಸರಿಯೆಂದು ಕಂಡು ಬಂದು ಸುಮ್ಮನಾದ. ಮನೆಯಲ್ಲಿ ಇದರಿಂದ ಯಾರಿಗೂ ಪಶ್ಚಾತ್ತಾಪ ಅನುಮಾನ ಉಂಟಾಗಲಿಲ್ಲ.

"ನೀವುಗಳೆಲ್ಲಾರು 'ರುಕ್ಕೂ'ನ ಹತ್ತಿರ ಹೋಗಿ ನೋಡಿಕೊಂಡು ಬರುತ್ತಿದ್ದಿರಿ. ಅಲ್ಲಿಗೆ ಹೋಗುವುದರ ಮೂಲಕ ಸುಶೀಲಳಿಗೆ ಜ್ವರ ಕಾಣಿಸಿಕೊಂಡಿತು. ಆಗಿನಿಂದ ನಾನು ಸುಶೀಲಳ ಹತ್ತಿರವೇ ಇರತೊಡಗಿದೆ. ಈ ವಿಷಯ ಹೇಗೋ 'ರುಕ್ಕೂ'ಗೆ ತಿಳಿಯಿತು. ಅಲ್ಲವೇನೋ ?" ಎಂದು ಚಿಕ್ಕಮ್ಮ ನನ್ನ ಕಡೆ ನೋಡಿದಳು.

ನಾನು ಮತ್ತೆ ಕತೆಯನ್ನು ಮುಂದುವರಿಸಿದೆ.

* * *

........ಅವಳಿಗೆ ಆ ವಿಷಯ ತಿಳಿಯಿತು. ಅನಂತರ ದಿನವೂ ಸುಶೀಲಳ ಜ್ವರದ ಬಗ್ಗೆ ಕೇಳುತ್ತಿದ್ದಳು. ಸುಶೀಲೆ ಚೆನ್ನಾಗಿರುವಳೆಂದು ಕೇಳಿ ಅವಳಿಗೆ ತೃಪ್ತಿಯಾಯಿತು. ಆ ತೃಪ್ತಿಯಿಂದ ಅವಳ ರೋಗವನ್ನು ಗುಣಮುಖವಾದಂತೆ ಕಂಡು ಬಂತು.

ಅಂದು ಅವಳ ಬೆಳಗಿನ ಟೆಂಪರೇಚರ್ ಕೊಂಚ ಕಡಿಮೆ ಇತ್ತು. ಅವಳಿಗೆ ಪೂರ್ಣ ಎಚ್ಚರವೂ ಇತ್ತು. "ಜ್ವರ ಎಷ್ಟಿದೆ?" ಎಂದು ಕೇಳಿದಾಗ ೧೦೩" ಇದ್ದದ್ದು ನೂರೆಂದು ಹೇಳಿದೆ. ಈ ಹಾಳು ಬಾಯಿಂದ ಎಷ್ಟು ಸಲ ಸುಳ್ಳು ಹೇಳಿದೆನೋ ಏನೋ? ಅವಳು ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು, ದೇವರ ಕಡೆ ತಿರುಗಿ ಕೈಮುಗಿದು "ಭಗವಂತ! ಸುಶೀಲಳಿಗೆ ಗುಣಪಡಿಸಿದಂತೆ ನನಗೂ ಜ್ವರ ಬೇಗ ಗುಣವಾಗಲಿ. ಅಂದರೆ ಇವರೆಲ್ಲರಿಗೂ ತೊಂದರೆ ಕಡಿಮೆಯಾಗುತ್ತದೆ. ಇವರಿಗೆ ನನ್ನಿಂದ ಎಷ್ಟು ತೊಂದರೆ! ಅಯ್ಯೋ ದೇವರೆ ನನಗೆಲ್ಲ ಗುಣವಾದಷ್ಟು" ಎಂಬ ಅವಳ ಆರ್ತಸ್ವರದ ಬೇಡಿಕೆ ನನ್ನ ಹೃದಯವನ್ನು ಕಲಕಿತು.

........ಎಂದಿನಂತೆ ಮುಂಜಾನೆ ಅವಳಿಗೆ ಮುಖ ತೊಳೆದು, ಅರಿವೆ ಬದಲಿಸಿ, ಮೈತೊಳಿಸಿದ ಕೆಲಸವು ಮುಗಿಸಿದ ವೇಳೆ ಡಾಕ್ಟರರು ಬಂದು ನೋಡುವ ಹೊತ್ತಿಗೆ ಅವಳು ಮಲಗಿದ ಕೋಣೆ ಸ್ವಚ್ಛವಾಗಿರುತ್ತಿತ್ತು. ವಾಸನೆ ಮುಂತಾದವುಗಳೂ ಯಾವುದೂ ಇರಬಾರದೆಂದು ಡೆಟ್ಟಾಲ್ ಚೆಲ್ಲುತ್ತಿದ್ದೆವು, ಮೇಲೆ ಅಗರ್ ಬತ್ತಿಯನ್ನು ಹೊತ್ತಿಸುತ್ತಿದ್ದೆವು.

ಆವರೆ ಅವಳ ತಲೆಯಲ್ಲಿ ಹೇನು ತೊಂದರೆಕೊಡಲಾರಂಭಿಸಿದವು. ಇದನ್ನು ತಡೆಯಲು ಯಾರಿಂದ ಸಾಧ್ಯ? ಇದನ್ನು ಕಂಡು ಎಲ್ಲರೂ ಆಶ್ಚರ್ಯ ಹೊಂದಿದರು. ಇದೊಂದು ಸಮಸ್ಯೆಯಾಗಿಯೇ ನಮ್ಮೆದುರು ಬಂದುನಿಂತಿತು. ಅವಳನ್ನು ಈ ಹೇನಿನ ಬಾಧೆಯಿಂದ ಬಿಡುಗಡೆಮಾಡುವುದು ಹೇಗೆಂಬುದು ಯಾರಿಗೂ ತೋಚಲಿಲ್ಲ. ರುಕ್ಮಿಣಿಯನ್ನು ಕದಲಿಸುವ ಸ್ಥಿತಿಯಲ್ಲಿರಲಿಲ್ಲ. ಮುಂದೇನೆಂದು ಎಲ್ಲರೂ ಯೋಚಿಸತೊಡಗಿದೆವು.

ಇದು ಹೇಗೆಸಂಭವಿಸಿತೆಂಬುದು ಯಾರಿಗೂ ತಿಳಿಯಲಿಲ್ಲ. ಡಾಕ್ಟರರು ಅವಳ ತಲೆಯ ಕಡೆ ಕೆಲವು ದಿನಗಳ ಹಿಂದೆ ನೋಡಿ ದಿನಕ್ಕೆ ಒಂದು ಸಲವಾ

ವರೂ ಹಿಕ್ಕಿ ಹೇನುತೆಗೆಯಬೇಕೆಂದು ಮನೆಯ ಯಜಮಾನಿ ರಾಜಮ್ಮಗೆ ಹೇಳಿದರಂತೆ. ರಾಜಮ್ಮ ಓಡಾಡುವಳೆಂದು ಅವಳಿಗೇ ಅವರು ಹೇಳಿದುದು ಸಹಜ. ಅವಳು ಮಾತ್ರ ಈ ವಿಷಯದಲ್ಲಿ ಅಲಕ್ಷ್ಯ ವಹಿಸಿದಳೆಂದು ಈಗ ಕಂಡುಬಂತು. ಇದನ್ನು ತಿಳಿದು ಡಾಕ್ಟರರು ಬಹಳ ನೊಂದುಕೊಂಡರು.

ರೋಗಿಗೆ ಹಡೆದ ತಾಯಿ ಇದ್ದರೆ ಈ ವಿಪತ್ತು ಬರುತ್ತಿರಲಿಲ್ಲ. ಹೆತ್ತ ತಾಯಿ ಕರುಳಿನ ಆರೈಕೆಯ ಮುಂದೆ ಮತ್ತಾವ ಆರೈಕೆಯೂ ಉಪಯೋಗವಿಲ್ಲವೆಂಬ ಮಾತು ಅಂದು ನನಗೆ ಸ್ಪಷ್ಟವಾಗಿ ಕಂಡುಬಂತು. ತಾಯಿಯನ್ನು ಕಳೆದುಕೊಂಡು ದುಃಖದಲ್ಲಿದ್ದ ಈ ಮುಗ್ಧಳ ದುಃಖಿಸೋದಿ ನನಗೆ ಅಯ್ಯೋ ಎನಿಸಿತು. ಮನೆಯಲ್ಲಿ ಹೆಂಗಸರಿಗೇನು ಕಡಮೆ? ಅವರಿಗಾದರೂ ಯೋಚನೆ ಇದ್ದುದು ಆಶ್ಚರ್ಯ. ಡಾಕ್ಟರರು ಎಚ್ಚರಿಸಿದ ಮೇಲೂ ಉದಾಸೀನತೆಯನ್ನು ತಾಳಿದ ರಾಜಮ್ಮನ ವರ್ತನೆ ಸಹಜವೇ? ತಾಯಿಯಿಲ್ಲದವಳೆಂದಾದರೂ ಆ ಹಿರಿಯಳಿಗೆ ಕನಿಕರಬಾರದಿದ್ದುದು ದುರ್ದೈವವೆನ್ನಬೇಕು ಎಂದು ಹೇಳಿದ ವಿಷಯವನ್ನು ನಮ್ಮ ಚಿಕ್ಕಮ್ಮ ಮತ್ತೆ ಮುಂದುವರಿಸಿದಳು.

o o o

“....ಅಯ್ಯೋ ಹುಚ್ಚು! ರಾಜಮ್ಮನಿಗೇಕೆ ಕನಿಕರ ಬರುತ್ತದೆ. ಆ ಮಹಾರಾಯಳು ನಮ್ಮ ಮನೆ ನಿರ್ವಂಶವಾದರೆ ನೋಡಿ ಸುಖಪಡಬೇಕೆಂದು ಬಯಸುವವಳು ರುಕ್ಮಗೆ ಜೀವಂತ ಇರಲು ನೆರವಾಗುವಳೇನೋ? ಇಂತಹ ಬೇಸಿಯ ಹೆಣ್ಣು ತಮ್ಮ ಮನೆಯಲ್ಲಿರುವುದು ತನ್ನ ಮಗಳು, ಅಳಿಯನಿಗೆ ಅಪಾಯವೆಂದು ರಗಳೆಮಾಡುತ್ತಿದ್ದ ಅವಳು ರುಕ್ಮಗೆ ತಲೆ ಹಿಕ್ಕುವಳೇ? ಇವಳು ಬೇಗ ತೊಲಗಿದರೆ ಒಳಿತೆಂದು........” ಎಂಬ ಮಾತಿಗೆ ಆಸರವಾಗಿ ಪಂಕಜಮ್ಮ ಮುಂದೆ ಹೀಗೆ ಮಾತನಾಡಿದಳು.

o o o

“ಚಿಕ್ಕಮ್ಮಾ, ಪಾಪ, ಆತನನ್ನೇತಕ್ಕೆ ಆಡಿಕೊಳ್ಳುವೆ? ಹೆತ್ತಹೊಟ್ಟೆ ಮಮತೆಯಿಂದ ಈ ಮಾತು ಆತನೇ ಹೇಳುತ್ತಿದ್ದಾನೆ. ಒಂದು ವೇಳೆ ತಲೆಯಲ್ಲಿ ಹೇನಾಗದಿದ್ದರೆ ಅವಳು ಬದುಕುತ್ತಿದ್ದಳೇನೋಯೆಂಬ ಆ ಪ. ಯಾದನ್ನು ಅಂದೇನು ಪ್ರಯೋಜನ; ರುಕ್ಮಳಂತಹ ಒಳ್ಳೇ ಹೆಣ್ಣು ಉಳಿಯ

ಬಾರದೆಂದೇ ದೇವರು ರಾಜಮ್ಮನಿಗೆ ಈ ಮರೆಯುವ ಬುದ್ಧಿ ಕೊಟ್ಟಿರಬೇಕು; ಇಲ್ಲದಿದ್ದರೆ ಅವಳು ಏನಾದರೂ ಮಾಡುತ್ತಿದ್ದಳು. ನಮ್ಮ ಸಂಕಟಕ್ಕೆ ಅಣೆಯನ್ನು ಅಂದರೇನು ಪ್ರಯೋಜನ? ಇರಲಿ ನಮಗಾದರೂ ಈ ಯೋಚನೆ ಏತಕ್ಕೆ ಬರಬಾರದಾಗಿತ್ತು? ನಾವೂ ಹತ್ತಿರವೇ ಇದ್ದೆವಲ್ಲ? ನಾವೂ ಅವಳನ್ನು ದಿನಾ ನೋಡುತ್ತಿದ್ದೆವಲ್ಲ......? ಆದ, ನಮ್ಮ ಕರ್ಮ; ಮುಖ್ಯ ಇಂತಹ ಚಲೋ ಹೆಣ್ಣು ಉಳಿಯಬಾರದೆಂಬುವುದೇ ದೈವಸಂಕಲ್ಪವೆಂದು ಕಾಣುತ್ತದೆ......" ಎಂದು ನಿಟ್ಟುಸಿರನ್ನು ಬಿಟ್ಟಳು. "ಅಮ್ಮಗೆ ತಲೆಯಲ್ಲಿ ಹೇನು ಬಿದ್ದಮೇಲೆ ಮತ್ತೇನು ನಡೆಯಿತು?" ಎಂದು ಸುಶೀಲೆ ಕೇಳಿದಳು. ರುಕ್ಕೂನ ಹಾಪಿನಕತೆಯನ್ನು ನಾನೇ ಮುಂದುವರಿಸಿದೆ.

* * *

ಆ ಹೇನಿನಿಂದ ಅವಳು ಮತ್ತಿಷ್ಟು ನಿರ್ಬಲಳಾದಳು. ಅವುಗಳ ಕಾಟ ತಪ್ಪಬಹುದೆಂದು ನೆನೆದು ಅವಳ ತಲೆ ಕೂದಲನ್ನು ಕತ್ತರಿಸಿದೆವು. ಆ ಕೆಲಸ ಮಾಡುವುದು ಅವಳಿಗೆ ತಿಳಿಯಲಿಲ್ಲ; ಎಚ್ಚರವಿರಲಿಲ್ಲ. ಅದರಿಂದ ಅವಳಿಗೆ ಹೇನಿನ ಬಾಧೆ ಕೊಂಚಮಟ್ಟಿಗೆ ಕಡಮೆಯಾಯಿತು. ಆ ಮೇಲೆ ಅವಳು ಸ್ವಲ್ಪ ಎಚ್ಚರಗೊಂಡಾಗ "ನನ್ನ ಕೂದಲೇನಾದವು?" ಎಂದು ನನ್ನನ್ನು ಕೇಳಿದಳು. ಹೇನು ಹೆಚ್ಚಾಗಲು ಕತ್ತರಿಸಿದೆವೆಂದು ನಾನು ಹೇಳಲು ಅವಳೇನೋ ಬೆಲೆಬಾಳುವ ವಸ್ತುವನ್ನು ಕಳೆದುಕೊಂಡವಳಂತೆ ಮುಖ ಸಣ್ಣದು ಮಾಡಿಕೊಂಡು ಮಾವನನ್ನು ಕುರಿತು "ಮಾವಾ, ನನ್ನ ಕೂದಲನ್ನೇಕೆ ಕತ್ತರಿಸಿರುವಿರಲ್ಲಾ; ನಾನು ಹೂ ಹೇಗೆ ಮುಡಿಯಬೇಕು?" ಎಂದ ಅವಳ ಮಾತಿಗೆ ನಾನು ಮನದಲ್ಲಿಯೇ ಮರುಗಿದೆ; ನನ್ನೆದೆ ನಡುಗಿತು. ಮುಂದೆ ಅವಳು ನಾನು ಇನ್ನು ಹೂ ಮುಡಿಯಲೇಬಾರದೇ? ಎಂದು ಕೇಳಿಕೊಂಡಾಗ ನನಗೆ ದುಃಖ ಉಕ್ಕಿಬಂತು. ಶೋಕ ತಡೆಯಲಾರದೆ ನಾನು ಮುಖವನ್ನು ಅತ್ತಿತ್ತಿರುವಿ ಕಣ್ಣೊರಸಿಕೊಂಡು "ತಾಯೀ ಕೂದಲಿಗೇಕಮ್ಮಾ ಇಷ್ಟು ಯೋಚನೆ? ಮತ್ತೆ ಬೆಳೆಯುತ್ತವೆ" ಎಂದು ನಾನು ಸಮಾಧಾನ ಹೇಳಿದೆ. ರುಕ್ಕೂ ಸುತ್ತಲಿನ ನಾಲ್ಕು ಮಂದಿಯ ಕಡೆ ಗಾಬರಿಯಿಂದ "ನನಗೇಕೆ ಹೀಗೆ ಅನ್ಯಾಯ ಮಾಡಿದಿರಿ" ಎಂದು ಕೇಳುವಂತಿತ್ತು ಅವಳ ಕಣ್ಣನೋಟ. ಮತ್ತಿಷ್ಟು ಅನ್ಯಾಯ ಮಾಡುವಿರಾ? ಎಂದು ಕೇಳುವಂತಿತ್ತು ಅವಳ ಕಣ್ಣಿನ ಸರಣಿ.

ಅವಳು ಬಿಗಿಲುಗೊಂಡಿದ್ದಳು. ಮಲ್ಲಿಗೆ ಲತೆಯಲ್ಲಿಯ ಹೂಗಳೆಲ್ಲ ಬಸ್ಸು ಕಿತ್ತುಹೊಂದಿದರೆ ಹೇಗೆ ಅದು ಕಳಾವಿಹೀನವಾಗಿ ಕಂಡುಬರುವುದೋ, ಕಾಯುತ್ತಿದ್ದ ಬಟ್ಟಲಿನಲ್ಲಿಯ ಹಾಲನ್ನು ಬೆಕ್ಕು ಕುಡಿದರೆ ನಿರಾಶಗೊಂಡ ಬಾಲಕನ ಮುಖವು ಹೇಗೆ ಬಿಗುಲುಗೊಳ್ಳುವುದೋ, ಹಾಗೆಯೇ ರುಕ್ಮಿಣಿಯ ಮುಖದಲ್ಲಿ ಕೃಷ್ಣತೆಯು ಆರ್ದ್ರದೃಷ್ಟಿ ನೆಲೆಗೊಂಡಿತ್ತು. ಅದೇ ನೋಟ ನೋಟವನ್ನು ನಮ್ಮೆಲ್ಲರ ಕಡೆ ಬೀರಿದಳು ರುಕ್ಮಿಣಿ.

ಅವಳು ಕೆಲವು ತಿಂಗಳ ಹಿಂದೆ ಮನೆಯ ಹಿತ್ತಲಲ್ಲಿ ಸೇವಂತಿಗೆ ಬಳ್ಳಿಯನ್ನು ನೆಡಿಸಿದ್ದಳು. ಅದು ಹೇಮಂತಋತುವಿನಲ್ಲಿ ಪುಷ್ಪಿಸಬೇಕಾದುದು. ಅವಸರದಿಂದ ಶರದೃತುವಿನಲ್ಲೇ ಹೂ ಬಿಡಲಾರಂಭಿಸಿತು. “ಯಾಕೆ ಈ ಅವಸರ? ಏನು ಮುಳುಗಿಹೋಗುತ್ತಿತ್ತು? ಆಗಲೇ ಹೂ ಬಿಡುತ್ತಲಿರುವಿ! ರುಕ್ಮಿಣಿ ಒಡನಿದ್ದರೆ ನಾವು ಹೂ ಬಿಡಲು ಅಂಜುವೆವೇನು?” ಎಂದು ಹಂಗಿಸಿತು ಸುಂದರ ಹೂವಿನಬಳ್ಳಿ. ಆದರೆ ಸೇವಂತಿಗೆಯ ಹೂ ಬಳ್ಳಿ ಮೆಲುದನಿಯಲ್ಲಿ “ಅಯ್ಯೋ ಇನ್ನೆಲ್ಲಿ ಬರುವಳು ರುಕ್ಕು?” ಎಂದು ಕಣ್ಣೀರಿಟ್ಟಿತೇ......ಎಂದು ನಾನು ಊಹಾಸಾಮ್ರಾಜ್ಯದಲ್ಲಿದ್ದು ಕಣ್ಣೊರಸಿಕೊಂಡೆ. ಕೂಡಲೇ ನನ್ನ ಚಿಕ್ಕಮ್ಮ ಮುಂದೆ ಸಾಗಿದಳು.

........ಮೂರನೇ ವಾರದಲ್ಲಿಯೇ ರುಕ್ಮಿಣಿ ಬಹಳ ಗಾಬರಿಯಾದಳು. ನಾನು ಮೊದಲು ಅವಳ ಹತ್ತಿರ ಬರಲಿಲ್ಲ; ಸುಶೀಲೆಯ ಹತ್ತಿರವೇ ಇರತೊಡಗಿದೆ. ಅವಳಿಗೆ ಹತ್ತು ದಿನದಲ್ಲೇ ಜ್ವರ ಕಡಮೆಯಾಯಿತು. ಅಂದಿನಿಂದ ಅವಳ ಹತ್ತಿರ ನಾನೇ ಇರತೊಡಗಿದೆ. ಒಂದು ದಿನ ರುಕ್ಮಿಣಿಯ ಗಂಡ ಬಂದಿದ್ದ. ಆತನ ಮುಖ ನೋಡಿ ರುಕ್ಮಿಣಿ ತಣ್ಣಗಾದಳು. ಇನ್ನೂ ಶೋಭನಕಾರ್ಯ ನಡೆದಿರಲಿಲ್ಲ. ಅವನೊಂದಿಗೆ ಸಂಸಾರ ಮಾಡದಿದ್ದರೂ ಅವನೆಂದರೆ ಎಷ್ಟೋ ಪ್ರೇಮ. ಆತ ಬಂದು ಹುಚ್ಚನಂತೆ ನಿಂತುಬಿಟ್ಟ. ಅವನನ್ನು ಒಂದು ತನ್ನ ಹತ್ತಿರ ಕುಳಿತುಕೊಳ್ಳಲು ಸೂಚಿಸಿದಳು. ಪಾಪ! ಹತ್ತಿರ ಬಂದು ಕುಳಿತುಕೊಂಡ ಮೇಲೆ ಅವನನ್ನು ಕಣ್ಣುತುಂಬಾ ನೋಡಿದಳು; ಅವಳ ಕಣ್ಣಾರಳಿದವು. ಏನಾದರೂ ಮಾತನಾಡಿಕೊಳ್ಳುವರೆಂದು ನಾನಿದ್ದರೆ ಅವರಿಗೆ ನಾಚಿಕೆಯೆಂದು ನಾನೇನೋ ಕೆಲಸದ ಮೇಲೆ ಎದ್ದು

ಹೋಗುವವಳಂತೆ ಎದ್ದು ಹೋದೆ; ಸತ್ಯಂ ಸಹಾ ಅಲ್ಲಿ ಇರಲಿಲ್ಲ. ಅವರು ಏನೇನೋ ಮಾತಾಡಿಕೊಂಡರು. ಅವನು ಎದ್ದುಹೋಗುವ ಸಮಯದಲ್ಲಿ ಅವನನ್ನು ಬಲು ದೈನ್ಯತೆಯಿಂದ ನೋಡುತ್ತ ಕೈಯಿಂದಲೇ ನಮಸ್ಕಾರ ಮಾಡಿ "ನಾಲ್ಕು ದಿನ ಕಳೆದು ಶಾಲೆಗೆ ರಜೆ ಹೇಳಿ ಬಂದುಬಿಡು; ನನಗೇನೂ ಗಾಬರಿಯಿಲ್ಲ; ಜ್ವರ ಕಡಮೆಯಾಗುವುದು; ನೀವೇನೂ ಗಾಬರಿಯಾಗಬೇಡಿ." ಎಂದು ಜ್ವರ ಬಹಳ ಹೆಚ್ಚಿದ್ದರೂ ಅವನಿಗೆ ಧೈರ್ಯಹೇಳಿ ಕಳಿಸಿದಳು. ಏನವಳ ಎಚ್ಚರವೂತು? ಅವಳಿಗಿದ್ದ ಆ ವ್ಯವಹಾರ ಜ್ಞಾನ ನಮ್ಮಂಥವರನ್ನು ಬೆರಗುಗೊಳಿಸಿತು.

ಎಲ್ಲ ಮಕ್ಕಳನ್ನೂ ಮಮತೆ, ವಿಶ್ವಾಸಗಳಿಂದ ಹೆಸರಿಟ್ಟು ಕರೆದು ಮಾತನಾಡಿಸುವುದು ಅವಳಿಗೆ ರುಚಿಸುವ ಕೆಲಸವಾಗಿತ್ತು. ರಾಧಾ ಹತ್ತಿರ ಬಂದನೆಂದರೆ ಅವನ ತಲೆಮೇಲೆ ಕೈಯಾಡಿಸುತ್ತ "ರಾಧಾ ಆಗಲೇ ದಣುವು ಮಾಡಿಕೊಳ್ಳುತ್ತೀಯಲ್ಲ; ನೀನು ಸತ್ತು ಬದುಕಿದಪ್ಪ" ಎಂದು ಹೇಳಿ ಅವನ ಹಿಂದೆ ಶಾಸ್ತ್ರೀ ಬಂದನೆಂದರೆ "ಶಾಸ್ತ್ರೀ ಅನ್ನ ಊಟ ಮಾಡಿದೆಯ? ಅನ್ನಕ್ಕೆ ಏನು ಸಾಧನೆ ಮಾಡಿದ್ದರು?" ಎಂದು ಕೇಳಿ ಅವನ ತೊದಲು ನುಡಿಗಳನ್ನು ಕೇಳಿ ಆನಂದಿಸುತ್ತಿದ್ದಳು. ತೀರ ಚಿಕ್ಕ ಮಗುವಾದ ವಿಜಯಳನ್ನು ಮುದ್ದಿಟ್ಟುಕೊಂಡು ಕಳಿಸುತ್ತಿದ್ದಳು. ಅವಳ ಈ ಮಮತೆ, ತಾಯಿ ಇಲ್ಲದ ಈ ತಬ್ಬಲಿಗಳಲ್ಲಿ ಅವಳ ಅಂತಃಕರಣವನ್ನು ಕಂಡು ನನಗೆ ಬಲು ಸೋಜಿಗವೆನಿಸುತ್ತಿತ್ತು.

ಅವಳು ಬೇನೆಯ ತೀವ್ರತೆಯಿಂದ ತೀರ ಹಣ್ಣಾಗಿದ್ದಳು. ದಿನವೂ ಅವಳಿಗೆ ಆಹಾರವೆಂದರೆ ಬಾರ್ಲಿಗಂಜಿ, ಮತ್ತು ಹಣ್ಣಿನ ತಿಳಿರಸ. ಅವಳ ಅತೀವ ವೇದನೆ ವರ್ಣಿಸಲಶಕ್ಯ. ನಾನವಳಿಗೆ ಗಾಳಿಬೀಸುತ್ತಿದ್ದೆ. ಐಸಗಡ್ಡೆಯನ್ನು ತಲೆಯ ಮೇಲೆ ಇರಿಸುತ್ತಿದ್ದೆ. ಇತರ ಕೆಲಸಗಳೆಲ್ಲವನ್ನೂ ಅವರ ಮಾವನೇ ಮಾಡುತ್ತಿದ್ದ.

ಒಂದು ದಿನ ಒಬ್ಬಳೇ ಕಾಯುತ್ತ ಕುಳಿತಿದ್ದೆ. ಐಸ್‌ಗಡ್ಡೆಯಿಂದ ಅವಳ ಶರೀರವನ್ನು ಒರೆಸುತ್ತಲಿದ್ದೆ; ಆಗ ಅವಳಿಗೆ ಪೂರ್ಣ ಎಚ್ಚರವಿತ್ತು.

"ಏನಮ್ಮಾ ಜನ! ಹೀಗೆ ರಾತ್ರಿ ಹಗಲೂ ಈ ಐಸ್‌ಗಡ್ಡೆಯನ್ನು ತಲೆಯ ಮೇಲೆ ಇರಿಸಿದರೆ ನನ್ನ ಜ್ವರಕಡಿಮೆಯಾಗುವುದೆಂದು ತಿಳಿದಿರೇನು? ಏಕೆ ನನಗೆ ಈ ತೊಂದರೆ! ಸುಮ್ಮನಿರಿ" ಎಂದು ಬಲು ಬೇಸರದಿಂದ ಹೇಳಿದಳು. ನನಗೆ ಅವಳ ಮಾತು ಕೇಳಿ ಕೊಂಚ ಗಾಬರಿಯಾಯಿತು. ಹೀಗೇಕೆ ಈ ಹೆಣ್ಣು ಮಾತನಾಡುತ್ತಿದೆಯೆಂದು ಮನದಲ್ಲಿಯೇ ನೆನೆದು, ನನ್ನ ಈ ಭಾವನೆಯನ್ನು ತೋರಗೊಡದೆ, "ತಾಯೀ ಹಾಗೆ ಹೇಳಬೇಡಮ್ಮ; ನಿನ್ನ ಈ ಜ್ವರ ಖಂಡಿತ ಕಡಿಮೆಯಾಗುತ್ತದೆ. ಸ್ವಲ್ಪ ಈ ಕಷ್ಟ ಸಹಿಸಬೇಕಮ್ಮ ಏನು ಮಾಡುವುದು ಹೇಳು?" ಎಂದು ನಾನು ಸಮಾಧಾನದ ಮಾತು ಹೇಳಿದೆ. "ಇಲ್ಲಮ್ಮಾ ಇದು ಮೂರನೇ ವಾರ. ಜ್ವರ ಕಡಿಮೆಯಾಗಬೇಕು. ಹಾಗಾದರೆ ಈಗ ಜ್ವರಕಡಿಮೆಯಾಗುವುದಂತೂ ಇಲ್ಲವೇ ಇಲ್ಲ; ಮೇಲೆ ನಿಮೋನಿಯಾ ಕೂಡ ಬಂದಿದೆ; ಈ ರೋಗ ನಯವಾಗುವುದೇನಮ್ಮ?" ಎಂದು ನಡುಗುವ ಸ್ವರದಲ್ಲಿ ಪ್ರಶ್ನಾರ್ಥಕವಾಗಿ ಅವಳು ಕೇಳಿದಳು.

ಅವಳು ಸ್ವಲ್ಪ ಗಟ್ಟಿ ಎದೆಯ ಹೆಣ್ಣು, ಇಂಥವಳೇ ಹೀಗೆ ಅಧೈರ್ಯ ಪಡುವುದು ನನಗೇಕೋ ಇದು ಒಳ್ಳೆಯ ಲಕ್ಷಣವಲ್ಲವೆಂದು ನನಗೆ-ಅಲ್ಲದೆ ಅವಳ ಧ್ವನಿ ಕುಗ್ಗಿಹೋಗಿತ್ತು.-ನನಗೆ ದುಃಖ ಹೆಚ್ಚಿತು. ಅವಳೆದುರಿಗೆ ನಾನೂ ಅತ್ತುಬಿಟ್ಟರೆ ಒಳಿತಲ್ಲವೆಂದು ತಿಳಿದು ನನ್ನ ದುಃಖವನ್ನು ನಿರ್ವಾಹವಿಲ್ಲದೆ ನುಂಗಿಕೊಂಡೆ.

"ತಾಯೀ ನೀನೇಕೆ ಸುಮ್ಮನೆ ಗಾಬರಿಯಾಗುವಿ. ನಾನು ಜ್ಯೋತಿಷಿಯನ್ನೂ ಕೂಡ ಕಂಡು ವಿಚಾರಿಸಿರುವೆನು. ಇದು ರಾಹು ದಶವಂತೆ. ಇನ್ನೂ ಹತ್ತುದಿನಗಳು ಕಳೆದವೆಂದರೆ ನಿನ್ನ ಗ್ರಹಬಲ ಚೆನ್ನಾಗುವುದಂತೆ. ನೀನು ಪೂರ್ಣ ಆರೋಗ್ಯ ಹೊಂದುವಿಯೆಂದು ಹೇಳಿರುವನು. ಭಯವೇಕಮ್ಮ ?" ಎಂದು ಧೈರ್ಯಹೇಳಿದೆ.

ರುಕ್ಮಿಣಿಗೆ ನನ್ನ ಮಾತಿನಲ್ಲಿ ವಿಶ್ವಾಸ ಉಂಟಾಯಿತು. ಅವಳೂ ತೃಪ್ತಿಹೊಂದಿದಂತೆ ಕಂಡು ಬಂತು. ಅವಳ ಮುಖದತ್ತ ಬಾಗಿ ಮಮತೆಯಿಂದ ಮುದ್ದಿಟ್ಟುಕೊಂಡೆ. ಆಗ ಅವಳು ನನ್ನನ್ನು ತನ್ನ ಎರಡೂ ತೋಳು

ಗಳಿಂದ ಬಂಧಿಸಿದಾಗ ಅವಳ ಕೈ ನಡುಗಿದವು. ತನ್ನ ಈ ಬೇನೆ ಕೊಂಚ ವಾದರೂ ಗುಣವಾಗುವ ಸಮಯ ಬಂತೆಂಬ ಸಮಾಧಾನ ಅವಳ ಹೃದ ಯದ ಆವೇಗವನ್ನು ಕಡಮೆ ಮಾಡಲಿಲ್ಲ. ಆದುದರಿಂದ ಮೈನಡುಕದ ಲ್ಲಿಯೇ "ನನಗೆ ಎಂದು ಗುಣವಾಗುವುದಪ್ಪ ? ನನಗೆಂದು ಅನ್ನ ಹಾಕು ವಿರಿ ?" ಎಂದು ದೈನ್ಯದಿಂದ ಕೇಳಿದಳು. ಅವಳಿಗೆ ಮತ್ತೆ ಅನ್ನ ಹಾಕುವ ಭಾಗ್ಯ ನನಗೆ ಬರುವುದೇಯೆಂದು ನನಗೆ ನಾನೇ ಮೌನದಲ್ಲಿಯೇ ಪ್ರಶ್ನೆ ಹಾಕಿಕೊಂಡೆ. ಭಯವು ನನ್ನನ್ನು ಆವರಿಸಿತ್ತು. ಮೈ ನಡುಗುತ್ತಿತ್ತು. ಅವರ ಮಾವ ಸ್ವತಃ ವೈದ್ಯ ಮಾಡುತ್ತಿರುವನು. ಅವನು ಅತ್ಯಂತ ಮಹ ತ್ವದ ಔಷಧವನ್ನೂ ಕೊಡುತ್ತಿರುವನು. ಅವನ ಹಸ್ತಗುಣ ಒಳ್ಳೆಯದೆಂದು ನಾನು ಕೇಳಿದ್ದೆ. ಆದುದರಿಂದಲೇ ಗುಣವಾಗಬಹುದೆಂಬ ಧೈರ್ಯ ನನ ಗಿತ್ತು. "ನಿಮ್ಮ ಮಾವನೇ ಎಲ್ಲ ಔಷಧ ಕೊಡುತ್ತಿರುವನು ತಾಯಿ; ಅವನ ಹಸ್ತಗುಣ ಒಳ್ಳೆಯದಂತೆ. ನಿನಗೆ ಖಂಡಿತ ಗುಣವಾಗುವುದಮ್ಮ. ಭಯ ವೇತಕ್ಕೆ ?" ಎಂದು ಸಮಾಧಾನ ಹೇಳಿದೆ. ಅವಳಿಗೆ ಹೇಳುವ ಮಾತುಗಳು ನನ್ನ ಮುಖದಿಂದ ತಾವಾಗಿಯೇ ಹೊರಬೀಳುತ್ತಿದ್ದವಾಗಲಿ, ನನಗೇಕೋ ಒಳಧೈರ್ಯವಿರಲಿಲ್ಲ. ಅಲ್ಲಿ ನಿಲ್ಲಲು ಧೈರ್ಯಸಾಲಲಿಲ್ಲ. ಭಾರವಾದ ಹೃದಯದಿಂದ ಹಿತ್ತಲಿಗೆ ಹೋಗಿ, ಮಸಸಾರ ಅತ್ತು ಮುಖ ತೊಳೆದು ಕೊಂಡು ಬಂದೆ. ಡಾಕ್ಟರುಗಳು ಅವಳಿಗೆ ಗಂಟೆಗೊಂದು ಇಂಜಕ್ಷನ್‌ನಂತೆ ಕೊಡುತ್ತ ಹೋದರು." ಎಂದು ಆ ಹೆಣ್ಣುಮಗಳು ಕಣ್ಣೀರಿಟ್ಟಳು. ನಾನು ಕತೆಯನ್ನು ಮುಂದುವರಿಸಿದೆ.

೦ ೦ ೦ ೦

"........ನೀವೇನಮ್ಮ ಹೇಳೋ ಮಾತು ? ಅವರು ಅವಳಿಗೆ ನೋವ ನ್ನುಂಟು ಮಾಡಲು ಮಾಡಿದ ಕೆಲಸವಲ್ಲ. ಮೂರನೇ ವಾರದಲ್ಲಿ ಅವಳ ಜ್ವರ ಹೆಚ್ಚು ಉದ್ರೇಕ ರೂಪತಾಳಿತು. ಒಮ್ಮೊಮ್ಮೆ ಎಚ್ಚರವೂ ತಪ್ಪು ತ್ತಿತ್ತು. ಆಗ ನಾನು ಹತ್ತಿರವೇ ಇರಲು ಗುರುತಿಸದೆ "ಅಮ್ಮಾ ಯಾಕಮ್ಮಾ! ಅಳುತ್ತಿ ?" ಎಂದು ಅಳುತ್ತಲೇ ತನ್ನ ಮುಂದಿನ ಬರಿಬಯಲನ್ನೇ ಯಾರನ್ನೋ ತಬ್ಬಿಕೊಳ್ಳುವಂತೆ ತನ್ನ ಕೈಗಳನ್ನು ಮುಂದೆ ಚಾಚಿ ಎದ್ದು ಕುಳಿತುಕೊಳ್ಳಲು ಯತ್ನಿಸಿದಳು. ಈ ಯಾತನೆಯನ್ನು ನೋಡಲಾರದೆ

ಮತ್ತೆ ಮೆಲ್ಲನೆ ಅವಳನ್ನು ಹಾಸಿಯಮೇಲೆ ಮಲಗಿಸಿ, "ಅಲ್ಲಿ ಯಾರೂ ಇಲ್ಲವಮ್ಮ ರುಕ್ಮಿಣಿ, ಸುಮ್ಮನೆ ಮಲಗಮ್ಮ" ಎಂದು ಹೇಳಿದೆ. "ಅಲ್ಲಿ ನೋಡಪ್ಪ ಅಮ್ಮ ಬಂದಿದ್ದಾಳೆ. ಇಲ್ಲೇ ಕುಳಿತಿದ್ದಾಳೆ; ಬಹಳ ಹೊತ್ತಾಯಿತು. ನಗುತ್ತಾಳೆ. ನನ್ನ ಕರಿತಾಳೆ" ಎಂದು ಹೇಳಿದಾಗ ಅವಳನ್ನು ಹೆಚ್ಚು ಮಾತ ನಾಡಿಸಿದರೆ ಪ್ರಯಾಸವಾದೀತೆಂದು ನೆನೆದು ಸುಮ್ಮನೆ ಮಲಗೆಂದು ಹೇಳಿದೆ.

ಡಾಕ್ಟರುಗಳು ಬಂದರು. ಅವಳನ್ನು ಪರೀಕ್ಷಿಸಿ ಮತ್ತೊಂದು ಇಂಜಕ್ಷನ್ ಕೊಟ್ಟರು. ಅವರು ಹೋಗುತ್ತಿರಲು ನಾನು ನಮಸ್ಕರಿಸಿದೆ; ಅವರು ನನ್ನ ಬೆನ್ನನ್ನು ಚಪ್ಪರಿಸುತ್ತ, "ಭಯವೇನೂಇಲ್ಲ. ಧೈರ್ಯದಿಂದಿರಿ" ಎಂದು ಹೇಳಿದರು. ಸತ್ಯಂ ಅವರನ್ನು ಹೊರಗೆ ಕಳಿಸಲು ಬಾಗಿಲವರೆಗೆ ಹೋದ.

ಈ ಹೊತ್ತಿಗೆ ಸತ್ಯಂ ನ ಹೆಂಡತಿ ಅಲ್ಲಿಗೆ ಬಂದಳು. ಅವಳು ದೂರದಲ್ಲೇ ನಿಂತು ನೋಡಿ ನೋಡಿ ಹೋದಳು. ಅದನ್ನು ರುಕ್ಮಿಣಿಯು ದಿಟ್ಟಿಸಿ ನೋಡುತ್ತ "ನೋಡಪ್ಪ, ಅತ್ತೆ ಹೋಗೇಬಿಟ್ಟಳು ಅವಳೇಕಪ್ಪ ನನ್ನನ್ನು ಹೀಗೆ ದುರದುರ ನೋಡುತ್ತಾಳೆ ? ನನ್ನ ಮೇಲೆ ಅವಳಿಗೇಕೆ ಕೋಪ ? ನಾನೇನು ಮಾಡಿದೆ ? ಅವಳು ಒಂದುಸಲವಾದರೂ ಈ ಕೋಣೆಗೆ ಬಂದಿಲ್ಲ. ಹೊರಗೇನಿಂತು ಕಟ್ಟಕಣ್ಣಿನಿಂದ ನೋಡಿ ಹೋಗ್ತಾಳೆ ?" ಎಂದು ದುಃಖದಿಂದ ಹೇಳುವಾಗ ಅವಳ ಬಳಲಿದ ಕಣ್ಣಲ್ಲಿ ನೀರು ಕಾಣಿಸಿಕೊಂಡಿತು. ನನ್ನ ಹೃದಯ ಕಿವುಚಿಕೊಂಡಿತು. ನನಗೆ ಮಾತನಾಡಲಾಗಲಿಲ್ಲ. ಅಯ್ಯೋ ದೈವವೇ ಇಂತಹ ಸ್ಥಿತಿಯನ್ನೇಕೆ ತಂದೆ. ನನ್ನ ಮಗಳಿಗೆ ಈ ಬೇನೆ, ಇತರರ ಮನೆಯಲ್ಲಿ ಬರುವಂತೆ ಏಕೆಮಾಡಿದೆ? "ಅವಳನ್ನು ಒಯ್ಯುವದಾದರೆ ಹೆತ್ತ ಮನೆಯಲ್ಲೇ ಸಾಯುವಂತೇಕೆ ಕರುಣಿಸಲಿಲ್ಲ" ಎಂದು ಮನದಲ್ಲಿಯೇ ನನ್ನ ದುರದೃಷ್ಟವನ್ನು ಹಳಿದುಕೊಂಡೆ.

ಅವಳಿಗೆ ಸಮಾಧಾನವಾಗುವಂತೆ "ಇರಲಮ್ಮ ರುಕ್ಮಿಣಿ ನಿನೇಕೆ ಇವುಗಳನ್ನೆಲ್ಲ ಮನಸ್ಸಿಗೆ ಹಚ್ಚಿಕೊಂಡು ಕೊರಗುವಿ ? ಆ ತಾಯಿ ಬರದಿದ್ದರೆ ಇಲ್ಲ. ಈಗ ಅವಳಿಂದೇನು ನಿನಗೆ ಕೆಲಸ ? ನಿನ್ನ ಜ್ವರ ಕೊಂಚ ಕಡಿಮೆಯಾಗಲಿ !

ನಮ್ಮ ಮನೆಗೇ ಹೋಗಿಬಿಡುವ. ಇತರರ ಮನೆಯಲ್ಲೇಕೆ ಈ ತೊಂದರೆ" ಎಂದು ನಾನು ಹೇಳಿದಾಗ ಅವಳಿಗೆ ಸ್ವಲ್ಪ ಸಮಾಧಾನವಾದಂತಾಯಿತು.

"ಅದಲ್ಲಪ್ಪ, ಅತ್ತಿಗೆ ನಾನೇನು ಮಾಡಿದೆ. ನನ್ನ ಮೇಲೇಕೆ ಅವಳಿಗೆ ಕೋಪ ?" ಎಂದು ಮತ್ತೆ ಮಲಗಿಕೊಂಡೇ ಕೇಳಿದಳು.

"ನಿಂದೇನಮ್ಮ ತಪ್ಪು ? ನೀನಾವ ಕೆಡಕೂ ಮಾಡಿಲ್ಲ. ನೀನು ಸುಮ್ಮನೆ ಮಲಗಮ್ಮ ಅಂದ್ರೆ ಅವಳ ಸ್ವಭಾವವೇ ಹಾಗೆ. ನಿನಗೆಗೊತ್ತಿದೆಯಲ್ಲ"

"ಅಹುದು. ಅಹುದು" ಎಂದು ತಲೆಯಾಡಿಸುತ್ತ ಮಾವಯ್ಯ ಬರಲಿಲ್ಲವೇನಪ್ಪ, ಇನ್ನೂ ?" ಎಂದು ಕೇಳಿದ ಮಾತಿಗೆ ಡಾಕ್ಟರರನ್ನು ಬಿಟ್ಟು ಬರಲು ಹೋಗಿರುವನುಯೆಂದು ಹೇಳುವ ಹೊತ್ತಿಗೆ ಸತ್ಯಂ ಕೋಣೆ ಯೊಳಗೆ ಬಂದ. ಆಗ ರುಕ್ಮಿಣಿಗೆ ಎಚ್ಚರತಪ್ಪಿತು. ಅದೆ ಎಚ್ಚರದಲ್ಲಿ ಏನನ್ನೋ ಗೊಣಗಿಕೊಳ್ಳುತ್ತಿದ್ದಳು. ಅವಳ ಮುಖಕ್ಕೆ ಹತ್ತಿರ ಹೋಗಿ "ಏನಮ್ಮ" ಎಂದು ಕೇಳಿದೆ. ಅವಳು ನನ್ನಪ್ರಶ್ನೆಯನ್ನು ಗಮನಿಸದೆ 'ಇತರ ದೈವಮುಲ' (ಇತರ ದೈವಗಳ) ಎಂಬ ತ್ಯಾಗರಾಜ ಕೀರ್ತನೆಯನ್ನು ಸಣ್ಣ ದನಿಯಲ್ಲಿ ಹಾಡಿಕೊಂಡಳು. "ಇದೇನಮ್ಮ ನಿನ್ನ ಜ್ವರದಲ್ಲಿ ಈ ಕೀರ್ತನೆಯನ್ನು ಹಾಡಿ ಏತಕ್ಕೆ ದಣಿವನ್ನು ಹೆಚ್ಚಿಸಿಕೊಳ್ಳುವೆ" ಯೆಂದು ಮತ್ತೆ ಕೇಳಿದ ಮಾತಿಗೆ ಅವಳಿಗೆ ಉತ್ತರಕೊಡುವ ಎಚ್ಚರವೇ ಇರಲಿಲ್ಲ.

ನಾನು ಬಲು ಕಾತರದಿಂದ ಸತ್ಯಂನ ಕಡೆ ನೋಡಿದೆ. ಅವನು ನನ್ನ ಹತ್ತಿರಬಂದು ನಿಂತು, ರುಕ್ಮಿಣಿಯ ಕಡೆ ಬಾಗಿ "ಏನಮ್ಮ ರುಕ್ಮಿಣಿ?" ಎಂದು ಗಟ್ಟಿಯಾಗಿ ಕೂಗಿದ. ಅವಳು ಸ್ವಲ್ಪ ಕಣ್ಣುಬಿಟ್ಟು ಅತನನ್ನು ನೋಡುತ್ತ "ಅಮ್ಮಾ ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ? ಈಗಲೇ ಬಂದೆಯಾ? ಬಾ, ಇಲ್ಲಿ ಕುಳಿತುಕೋ. ಯಾಕಮ್ಮ ಬಹಳ ಯೋಚಿಸುತ್ತಿರುವಿ?" ಎಂದು ಪೇಚಾಡುತ್ತ ಮೆಲ್ಲಗೆ ಕಣ್ಣುಮುಚ್ಚಿಕೊಂಡಳು.

ಆಗ ಸತ್ಯಂ, ಅವಳ ಮೈಮೇಲೆ ಕೈ ಇಟ್ಟು "ರುಕ್ಮಿಣೀ, ನಾನಮ್ಮ ನಿನ್ನ ಮಾವ" ಎಂದು ಎಚ್ಚರಿಸಿದ. ಅವಳು ಬಲವಂತದಿಂದ ಕಣ್ಣುಗಳನ್ನು ತೆಗೆದು ಆತನನ್ನು ಗುರುತಿಸಿ "ಮಾವ ನೀನೇನು? ಬಾ, ಇಲ್ಲಿ ಕುಳಿತುಕೋ

ನನ್ನ ಮಾನ ಬಲು ಒಳ್ಳೆಯವ. ಇಂಥ ಅಕ್ಕರೆಯ ಮಾವ ನನಗೆ ದೊರೆತಿ ದುದು ನನ್ನ ಭಾಗ್ಯ. ಮಾವಾ ನನ್ನ ದುಃಖವನ್ನು ಅಡಗಿಸಲು ನನಗಾವ ಸ್ಥಳವೂ ಇಲ್ಲ. ನಿನ್ನ ವೈ ನನಗಾಸರ, ಹತ್ತಿರ ಬಾ ಮಾವಾ" ಎಂದು ಅವನ ಹೊಟ್ಟೆಯ ಹತ್ತಿರ ಮುಖವನ್ನು ಬಚ್ಚಿಟ್ಟುಕೊಂಡು ಭೋರೆಂದು ಅಳತೊಡ ಗಿದಳು. ಅಷ್ಟು ವೈಮರೆತು ಅವಳು ಆವೇಶದಿಂದ ಅತ್ತುದುದು ಅಂದೇ ಮೊದಲು. ಹೀಗೆ ಎಚ್ಚರದ ತಿಳಿವಳಿಕೆಯ ಮಾತಿನ ಹಿಂದೆ ಮತ್ತೆ ಅವಳು "ಮಾವ ಅಮ್ಮಗೆ ನಿನ್ನ ವಿಷಯ ಹೇಳಿದೆ. ನೀನು ನನಗಾಗಿ ಪಟ್ಟ ಕಷ್ಟ ವನ್ನು ವಿವರಿಸಿದೆ. ನಿನಗೆ ನನ್ನ ಆರೈಕೆಯಿಂದಾದ ನೋವನ್ನು ಹೇಳಿದೆ. ನನಗೆ ಈಗ ಜ್ವರ ಏನೂ ಇಲ್ಲ ನೋಡು. ಜ್ವರ ಬಿಟ್ಟಿದೆ. ನನ್ನ ಮಾತು ಕೇಳಿ ಅಮ್ಮ ಸಂತೋಷಪಟ್ಟಳು. ಮಾವನ ಮಾತಿನಂತೆ ನಡೆದುಕೋ ತಾಯಿ. ಆತನನ್ನು ನೋಯಿಸಬೇಡ, ಆತನಿಗೆ ಹೆಚ್ಚು ಕಷ್ಟಕೊಡಬೇಡ" ಯೆಂದು ಅರೆ ಎಚ್ಚರದಲ್ಲಿಯೇ ನನ್ನನ್ನು ಎಚ್ಚರಿಸಿದಳು. ನಿನಗೇ ನಾದರೂ

ನಾನು ತೊಂದರೆ ಕೊಟ್ಟಿರುವೆನೇ? ಹೇಳು ಮಾವಾ? ಎಂದು ಅವನಿಗೊಂದು ಸಲ ನಮಸ್ಕಾರ ಮಾಡಿ ದಣಿದ ನೋಟದಿಂದ ಅವನನ್ನು ನೋಡಿದಳು.

ಅಂದೇಕೋ ಅನಿರೀಕ್ಷಿತವಾಗಿ ಮಳೆ ಬಂತು. ಕೊಂಚ ಛಳಿಯೂ ಇತ್ತು. ಆದುದರಿಂದ ಬಾಗಿಲು ಮುಚ್ಚುವುದು ಒಳಿತೆಂದು ಕಿಟಕಿಯ ಹತ್ತಿರ ನಾನು ಹೋದೆ. ಅವಳದನ್ನು ನೋಡಿ "ಮಾವಾ ಕಿಟಕಿಗಳನ್ನು ಮುಚ್ಚ ಬೇಡೆಂದು ಹೇಳು. ಮುಚ್ಚಿದರೆ ಅಮ್ಮ ಹೇಗೆ ಬರುವಳು? ಮಾವ ನಮ್ಮಮ್ಮ ನಿನಗೂ ಅಮ್ಮಲ್ಲವೇನು ಮಾವ?" ಎಂದು ಕೇಳಿದಳು.

ಸತ್ಯಂ ತನ್ನ ದುಃಖವನ್ನು ನುಂಗಿಕೊಂಡು ಧೈರ್ಯಹೊಂದಿದ್ದ. "ನನ್ನ ತಾಯಿ ನಿನಗೂ ತಾಯಿ ಅಲ್ಲವೇ ಮಾವಾ" ಎಂದು ಹೇಳಿದ ರುಕ್ಮಿ ಣಿಯ ಅಜ್ಞಾನದ ನುಡಿಗೆ ಅವನು ಗಾಬರಿಯಾದ. ಅವನಲ್ಲಿ, ಈ ಸುದಿನ ಹುದುಗಿಕೊಂಡ ದುಃಖ ಉಕ್ಕಿ ಹೊರಗೆ ಬಂತು. ನಾನು ಮೂಕನಾಗಿಯೇ ಹೀಗೇಕೆಯೆಂದು ಕೇಳಿದೆ. ಅದಕ್ಕೆ ಅವನು ಅಳುವ ಸ್ವರದಲ್ಲಿಯೇ "ಇನ್ನೇನು ಉಳಿದಿದೆ ಭಾವಾ, ನಮ್ಮ ರುಕ್ಮಿಣಿ ನಮಗೆ ಉಳಿಯುವದಿಲ್ಲ.

ಆವಳಿಗೆ ಇಂದು ಸನ್ನಿ ಬಲವಾಗಿದೆ. ನಮ್ಮ ಕೈ ಮೀರಿದೆ. ಇವಳು ಇನ್ನು ಉಳಿಯುವದಿಲ್ಲ" ಎಂದು ಕಣ್ಣೊರಸಿಕೊಳ್ಳುತ್ತ ಹೇಳಿದ. ಅಂದಿನಿಂದ ಆವಳು ಈ ಲೋಕದಲ್ಲಿಯೇ ಇರಲಿಲ್ಲ. ಯಾವುದೋ ಒಂದು ಬಗೆಯ ಹುಚ್ಚು ಹುಚ್ಚು ಹಾಡುಗಳನ್ನೂ, ಸಮಯ-ಸಂದರ್ಭಗಳಿಲ್ಲದ ಮಾತುಗಳನ್ನೂ ಆಡುತ್ತಲಿದ್ದಳು. ಮತ್ತೊಂದು ಸಮಯ ಪೂರ್ಣ ಎಚ್ಚರವಾದಾಗ ನಮ್ಮೊಂದಿಗೆ ಸರಿಯಾಗಿಯೇ ಮಾತನಾಡುತ್ತಿದ್ದಳು. ನಮ್ಮ ಕೇಳಿಕೆಗಳಿಗೆ ಸರಿಯಾಗಿ ಮಾರುತ್ತರಗಳನ್ನು ಕೊಡುತ್ತಲಿದ್ದಳು. ಅಂದಿನಿಂದ ನಾವೆಲ್ಲರೂ ಗೊಂದಲದಲ್ಲಿಯೇ ಇದ್ದೆವು. ಇಷ್ಟು ಕಷ್ಟಪಟ್ಟು ಸೇವೆ-ಶುಶ್ರೂಷೆ ಮಾಡಿದರೂ ಈ ತಾಯಿಯ ಬೇನೆ ಕಡಮೆಯಾಗದಿದೆ. ಎಂಬ ವೇದನೆ ನಮ್ಮೆಲ್ಲರನ್ನೂ ಹಣ್ಣುಮಾಡಿತು.........

....ಅಲ್ಲಿಗೆ ನಾನು ಮನಸ್ಸಿಗೆ ತೊಂದರೆಯಾದುದರಿಂದ ಸ್ವಲ್ಪ ಸುಮ್ಮನಾದೆ. ಹುಡುಗರೆಲ್ಲರೂ ಆವೇಶದಿಂದ ಕೇಳುತ್ತಿರುವಾಗ ಅವರ ಕಣ್ಣುಗಳಲ್ಲಿಯೂ ನೀರೂರತೊಡಗಿತು. ಆದುದರಿಂದ ಮತ್ತೆ ಹೊಸ ಪ್ರಶ್ನೆಗಳನು ಕೇಳದೆ ಸುಮ್ಮನಿದ್ದರು. ಆದರೆ ಜಾಣೆಯಾದ ಸುಶೀಲೆ "ಅಪ್ಪಾ, ರುಕ್ಕಕ್ಕಗೆ ಬೇನೆ ಅಷ್ಟು ವಿಕೋಪಕ್ಕಿಟ್ಟುಕೊಂಡಾಗ ಅವಳ ಗಂಡ ಬರಲಿಲ್ಲವೇನು?" ಎಂದು ಕೇಳಿದ ಪ್ರಶ್ನೆಗೆ ನಾನು "ಅಹುದಮ್ಮಾ, ಅವನಿಗೆ ನಾನೇ ಎಲ್ಲ ವಿವರವನ್ನು ದಿನದಿನಕ್ಕೂ ಬರೆಯುತ್ತಿದ್ದೆ. ಆಗ ಸೆಪ್ಟಂಬರ್ ಪರೀಕ್ಷೆಗಳು. ಇವಳ ಬೇನೆ ಬಹಳ ಹೆಚ್ಚೆಂದು ಬರೆದರೆ ಅವನ ಪರೀಕ್ಷೆಗೆ ತೊಂದರೆಯಾಗಬಹುದೆಂದು ಇದ್ದ ವಿಷಯವನ್ನು ಕೊಂಚ ಮರೆಯಾಗಿಸಿ ಬರೆದೆ. ಆದರೆ ಬೇನೆ ಬಹಳ ಬಲವಾದಾಗ ಬರೆದೆ. ಆವಳ ತಂದೆ ಬಹಳ ಖಾಯಿಲೆಯೆಂದು ತಮ್ಮ ಹಳ್ಳಿಗೆ ಹೋಗಿದ್ದ. ನನ್ನ ಆ ನಿರಾಶೆಯ ಪತ್ರ ಅವನಿಗೆ ಸೇರಲೇ ಇಲ್ಲ. ನನಗಿದೊಂದೂ ತಿಳಿಯದೇ ಸುಮ್ಮನಿದ್ದೆ. ಪಾಪ ಆವರ ತಂದೆಯವರಿಗೆ ಬರೆದಿದ್ದರಾದರೂ ಒಳಿತಾಗುತ್ತಿತ್ತೇನೋ?" ಎಂದು ಹೇಳಿ ಸುಮ್ಮನಾದಾಗ, ಪಂಕಜಮ್ಮ ಈ ಕತೆಯ ಎಳೆಯನ್ನೆತ್ತಿಕೊಂಡು ಮುಂದರಿದಳು.

o o o

.....ಆ ಸನ್ನೆ ಕಾಣಿಸಿಕೊಂಡ ದಿನದಿಂದ ಪ್ರತಿದಿನವೂ ಟಪಾಲಿನವನು ಹತ್ತುಗಂಟೆಗೆ ಬರುವವೇಳೆಗೆ ಸರಿಯಾಗಿ ಅವಳು ಎಚ್ಚರದಿಂದ "ಮಾವಾ

ನನಗೇನಾದರೂ ಪತ್ರಗಳು ಬಂದಿವೆಯೇ?" ಎಂದು ಕೇಳುತ್ತಿದ್ದಳು. ಇಲ್ಲ ವೆಂದು ಹೇಳಿದಾಗ ಅವಳು ಮುಖ ಸಣ್ಣದು ಮಾಡಿಕೊಂಡು ಮತ್ತೆ ತೆಪ್ಪಗೆ ಮಲಗಿಬಿಡುತ್ತಿದ್ದಳು. ಯಾರಿಂದ ಕಾಗದಗಳು ಬರಬೇಕೆಂದು ನೆನೆದಳೋ, ಅವಳ ಮನಸ್ಸಿನಲ್ಲಿರುವುದು ಯಾರಿಗೆ ತಿಳಿಯಬೇಕು? ದಿನವೂ ಇದೇಬಗೆಯ ಪ್ರಶ್ನೆ. ನಮಗೆ ಇವಳ ಈ ಪೇಚಾಟ ಸಂಕಟಕ್ಕೆ ಇಟ್ಟುಕೊಂಡಿತು.

ಒಂದು ದಿನ ಎಂದಿನಂತೆ ನಿನಗೆ ಯಾರಿಂದ ಕಾಗದ ಬರಬೇಕಾಗಿದೆ ತಾಯಿ? ''ಎಂದು ಕೇಳಿದರೆ ಅವಳಿಂದ ಎಚ್ಚರದ ಸಮಾಧಾನವೇ ಇಲ್ಲ' ಮತ್ತೆ ಜ್ಞಾನವಿಲ್ಲದ, ಅರ್ಥವಿಲ್ಲದ ಮಾತುಗಳೇ. ಒಂದೊಂದು ಸಲ ಅಂದು ಕಾಗದ ಬರಲಿಲ್ಲವೆಂದು ಹೇಳಿದಾಗ ''ಬರಲಿಲ್ಲವೇ? ಸರಿ. ನಾಳೆ ಖಂಡಿತ ಬರುತ್ತದೆ ನಿಜ." ಎಂದು ತನ್ನಷ್ಟಕ್ಕೆ ತಾನೇ ಸಮಾಧಾನಪಟ್ಟು ಕೊಂಡು ಸುಮ್ಮನಾಗುತ್ತಿದ್ದಳು.

ಮರುಭೂಮಿಯಲ್ಲಿ ನೀರಿಗೆಂದು ತಿರುಗಿ ತಿರುಗಿ ಅಲೆದಾಡಿ ಕುಡಿ ಯಲು ನೀರು ದೊರೆಯದೆ, ಪ್ರಾಣ ಹೋಗುವುದೆಂದು ನಿರಾಶೆ ಹೊಂದಿದ ಪ್ರಯಾಣಿಕನು ಮುಖವನ್ನೆತ್ತಿ ನೋಡುವಂತೆ ಆ ತಾಯಿ ನಮ್ಮೆಲ್ಲರನ್ನೂ ನೋಡುವ ಆ ಮುಖದ ನಿರಾಶಾಭಂಗುರದ ಹೊಟ್ಟೆಕಿವುಚುವ ಅವಳವೇದನೆ ಯನ್ನು ನಮ್ಮಿಂದ ನೋಡಲಾಗಲಿಲ್ಲ.

ಅವಳ ಈ ದುಃಖವನ್ನು ನೋಡಲಾಗದೇ ನಾನೇ ನಿಮ್ಮ ತಂದೆಗೆ " ಅವಳ ದುಃಖ ಬಹಳವಾಗಿದೆ. ಇವಳು ಅಂಗಲಾಚಿ ಬೇಡುವುದು ನೋಡ ಲಾರೆ. ಆತನನ್ನು ಗೋಪ್ಯವಾಗಿ ಕರೆದು ಎಲ್ಲಿಂದಲೊ ಪತ್ರ ಬರುವಂತೆ ಮಾಡು. ಅವಳಿಗೆ ಸಮಾಧಾನವಾಗುತ್ತದೆ. ಎಲ್ಲಿಂದಲಾದರೂ ಒಂದು ಕಾಗದ ಬಂದರೆ ಸಾಕು. ನೀನೇ ಒಂದು ಪತ್ರ ಬರೆದು ಟಪಾಲಿನಲ್ಲಿಹಾಕು. ಅದು ಬಂದಿತೆಂದರೆ ಸ್ವಲ್ಪ ನೆಮ್ಮದಿಯೆನಿಸಬಹುದು. ಅದರಿಂದಲೇನಾ ದರೂ ಅವಳ ಬೇನೆಯ ಕಾವು, ಮಿಡಿತ ಕಡಮೆಯಾಗಬಹುದು. ಇಲ್ಲವಾದರೆ ಅವಳ ಗೆಳತಿಯರಿಗಾದರೂ ಅರ್ಜಂಟ್ ಕಾಗದ ಬರೆದು, ಬೇಗ ಬದಲು ಬರುವಂತೆ ಪ್ರಯತ್ನಿಸು" ಎಂದು ಹೇಳಿದೆ.

ನಿಮ್ಮ ತಂದೆ ತಕ್ಷಣವೇ ನಿಮ್ಮೂರಲ್ಲಿರುವ ರುಕ್ಮಿಣಿಯ ಶಾಲೆಯ ಗೆಳತಿಯಾದ ಜಯಳಿಗೆ ಪತ್ರಬರೆದ. ಇಲ್ಲಿಯ ಪರಿಸ್ಥಿತಿಯನ್ನು ವಿವರಿಸಿ ಬರೆದ ಕೂಡಲೇ ಮಾರನೆಯ ದಿನವೇ ಅವಳಿಂದ ಮಾರೋಲೆ ಬಂದಿತು.

ಅಂದು ಅವಳು ಸರಿಯಾದ ವೇಳೆಗೆ ಪತ್ರ ಬಂದಿತೇ ಎಂದು ಕೇಳುವ ಸಮಯಕ್ಕೆ ಸರಿಯಾಗಿ ಟಪಾಲಿನವನೇ ಅವಳ ಹೆಸರನ್ನು ಎತ್ತಿಕರೆದು ಕಾಗದ ವನ್ನು ಕೊಟ್ಟನು. ಅದನ್ನು ಅವಳಿಗೆ ನಾವು ಕೊಡಲು 'ಯಾರಿಂದ ಕಾಗದ' ಎಂದು ಕೇಳಿದಳು. "ನಿನ್ನ ಸ್ನೇಹಿತೆ ಜಯಳು, ನಿಮ್ಮೂರಿನಿಂದ ಬರೆದಿದ್ದಾಳೆ" ಎಂದು ನಾವು ಹೇಳಲು ಆ ಪತ್ರವನ್ನು ಆದರದಿಂದ ತೆಗೆದುಕೊಂಡು ಒಡೆದು ನೋಡುವಳೆಂದು ನಾವು ಹಿಗ್ಗಿದೆವು. ಆದರೆ ಆ ಪತ್ರ ಅವಳ ಸ್ನೇಹಿತಳು ಬರೆದುದೆಂದು ತಿಳಿದು ಅದನ್ನು ತಲೆದಿಂಬಿನ ಕೆಳಗಿಟ್ಟುಕೊಂಡು ನಿರುತ್ಸಾಹ ದಿಂದ ಮಲಗಿದಳು. ಏತಕ್ಕೋ ಯೋಚನೆಯಿಂದ ದಿಗಿಲುಗೊಂಡವಳಂತೆ ಮೇಲೆ ನೋಡಿದಳು. ಸ್ವಲ್ಪ ಸಮಯವಾದ ನಂತರ ಮತ್ತೇನು ಯೋಚನೆ ಬಂತೋ ಏನೋ ಆ ಪತ್ರವನ್ನು ಒಡೆದು ಓದಲಾರಂಭಿಸಿದಳು. ಆ ಪತ್ರ ದಲ್ಲಿ ಜಯಳು ಕೊನೆಯಲ್ಲಿ ಬರೆದಿರುವುದೇನಂದರೆ, "ರುಕ್ಮಿಣೀ, ನೀನು ಶಾಲೆ ಬಿಟ್ಟು ಎರಡು ತಿಂಗಳುಗಳಾದವು. ಈ ವರುಷ ನಿನ್ನ ಓದು ಇಲ್ಲಿಗೆ ಮುಗಿಯಿತು. ನಿನಗೆ ದಿನಗಳು ಇನ್ನು ಉಳಿದಿಲ್ಲ." ಎಂಬ ಮಾತುಗಳು ಅವಳ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿದಂತಿವೆ.

ಹತ್ತಿರವೇ ಕುಳಿತಿದ್ದ ತಂದೆಯನ್ನು ನೋಡಿ "ಕಾಗದಾ ಬಂದಿದೆ ಅಪ್ಪ, ನನಗೆ ದಿನಗಳು ಆಗಿಹೋಗಿವೆಯಂತೆ" ಎಂದು ಹೇಳಿ ಸುಮ್ಮನಾದಳು. ನಿಮ್ಮ ತಂದೆ ಬಲು ಸೋತುಹೋದ. ಬಾಯಿಂದ ಮಾತುಬಾರಲೊಲ್ಲದು. ಉದ್ವೇಗ ಹೆಚ್ಚಿತು. ಚಿಮ್ಮಿಬರುವ ಕಣ್ಣೀರನ್ನು ಅವಳಿಗೆ ಕಾಣದಂತೆ ಒರಸಿ ಕೊಂಡು ಮಗಳ ಮೇಲೆ ಬಾಗಿ, ಅವಳ ಸೋತು ಹೋದ ಗಲ್ಲಗಳನ್ನು ಮುದ್ದಿಡುತ್ತ' "ತಾಯಿ ಏನು ಈ ಹುಚ್ಚು ಮಾತು ? ಸುಮ್ಮನೆ ಮನಸ್ಸಿಗೆ ನೋವನ್ನುಂಟುಮಾಡಿಕೊಳ್ಳುವುದೇತಕ್ಕೆ ? ಮಲಗಮ್ಮ ವಿಶ್ರಾಂತಿ ಪಡೆದರೆ ನಿನಗೇ ಒಳ್ಳೆಯದಲ್ಲವೆ ?" ಎಂದು ಸೋತು ಹೋದ ಸ್ವರದಲ್ಲಿ ಹೇಳಿದ ನನ್ನ ಮಾತುಗಳನ್ನು ಕೇಳಿ "ಇಲ್ಲಪ್ಪ ಮಲಗುತ್ತೇನೆ." ಎಂದು ಹೇಳಿ ಮಲಗಿ

ವಳು. ಮುಂದೆ ಪಂಕಜಮ್ಮನಿಗೆ ದುಃಖ ಉಕ್ಕೇರಿ ಬರಲು, ನಾನು ಮುಂದಿನ ಕತೆಯನ್ನು ಮುಂದರಿಸಿದೆ.

o o o

........ಅಂದಿನಿಂದ ಅವಳು ಈ ಲೋಕದಲ್ಲೇ ಇಲ್ಲ. ತನಗೆ ತೋಚಿದ ಹಾಡುಗಳನ್ನು ಹಾಡಿಕೊಳ್ಳುವುದು, ಒಮ್ಮೊಮ್ಮೆ ನಗುವುದು, ಮೇಲಿಂದ ಮೇಲೆ ಯಾರಿಗೋ ಕೈಮುಗಿಯುವುದು, ನಡುನಡುವೆ ದಿಟ್ಟಿಸಿನೋಡಿ ಕಣ್ಣುಪಿಳುಕಿಸುವುದು, ಯಾರು ಹತ್ತಿರ ಬಂದರೂ ಗಮನಿಸದೇ ಪದಧ್ಯಾನ ದಲ್ಲೇ ಉಳಿಯುವುದು, ಕೆಲವು ಸಾರೆ ಯಾರನ್ನೋ ಹತ್ತಿರ ಬಾಯೆಂದು ಕರೆಯುವದು, ಆಶ್ಚರ್ಯದ ದೃಷ್ಟಿಯಿಂದ ಎದೆ ಇಕ್ಕದೆ ಬಾಗಿಲ ಕಡೆ ಒಮ್ಮೊಮ್ಮೆ ನೋಡಿ ಬಾಯೆಂದು ಕೈಸನ್ನೆ ಮಾಡಿ ತನ್ನ ಹಾಸಿಗೆಯನ್ನು ತೋರಿಸುವುದು, ಮುಂತಾದ ಹುಚ್ಚುಹುಚ್ಚು ಚೇಷ್ಟೆಗಳು ಹೆಚ್ಚಾಗತೊಡಗಿ ದವು ಸತ್ಯಂ ಅಂದಿನಿಂದ ಅವಳ ಹಾಸಿಗೆಯಿಂದ ದೂರ ಸರಿಯಲೇ ಇಲ್ಲ. ರಾತ್ರಿ ಹಗಲೂ ಅವಳ ಹತ್ತಿರದಲ್ಲಿಯೇ ಇರತೊಡಗಿದ. ನಿದ್ರೆ ಆಹಾರಗ ಳನ್ನು ಪೂರ್ಣಬಿಟ್ಟಂತೆಯೇ ಸರಿ. ನಾನಾದರೂ ಆಗಾಗ್ಗೆ ಕೊಂಚ ಅನ್ನ ವನ್ನು ತಿನ್ನುತ್ತಿದ್ದೆ. ಅವನು ಪೂರ್ಣ ಅನ್ನದ ಆಗುಳನ್ನೇ ಕಾಣುತ್ತಿದ್ದಿಲ್ಲ. ಇದೇನಪ್ಪಾ ಎಂದು ಮಾತನಾಡಿಸಿದರೆ ಸಿಟ್ಟಿಗೇಳುತ್ತಿದ್ದ. ಅವನ ಅತ್ತೆಯ ವರಿಗೆ ಇದೆಲ್ಲವೂ ನೋಡಿ ಬಹಳ ನೋವಾಯಿತು. ಅವನಿಗೆ ಬೇನೆ ಬರು ವುದೆಂದು ಭಯಹೊಂದಿದಳು. ಆ ಪುಣ್ಯಾತ್ಮಳು ಅನೇಕ ವಿಧದಲ್ಲಿ ಹೇಳಿ ನೋಡಿದಳು. ಆದರೂ ಪ್ರಯೋಜನವಾಗಲಿಲ್ಲ. ಸ್ವಲ್ಪ ಅನ್ನ,ನಿದ್ರೆ, ಆಹಾರ ಮನುಷ್ಯನಿಗೆ ಇದ್ದರಲ್ಲದೆ ಸುಖವಿಲ್ಲ, ಎಂದು ಎಷ್ಟೋ ಹೇಳಿ ನೋಡಿದಳು. ಆ ಹುಡುಗಿಯನ್ನು ಕಾದುಕೊಂಡಿರಲು ಜನರಿದ್ದಾರೆ. ನೀನೇಕೆ ಒಬ್ಬನೇ ಕಷ್ಟಪಡುವಿ; ಬೇಡಪ್ಪಾ ಎಂದು ಅವನಗಲ್ಲ ಹಿಡಿದು ಬೇಡಿಕೊಂಡಳು ಅವನು ಯಾರ ಮಾತನ್ನೂ ಕೇಳದಂತಾದನು. ''ಯಾರು ಎಷ್ಟು ಮಂದಿ ಇದ್ದರೇನು? ನಾನು ಅವಳ ಹತ್ತಿರ ಇರದಿದ್ದರೆ, ಅವಳ ಗತಿ ಮುಗಿದಂತೆಯೇ ನಾನೆಂದರೆ ಅವಳಿಗೆ ಹೆಚ್ಚಿನ ಪ್ರೀತಿ, ನಾನಲ್ಲದೆ ಮತ್ತಾರೂ ಅವಳಿಗೆ ಶಾಂತಿ ಯನ್ನು ಕೊಡಲಾರರು. ಅವಳು ಯಾವ ಸಮಯದಲ್ಲಿ ಏನನ್ನು ಬೇಡು ವಳೋ" ಎಂದು ಹೇಳಿ ಸುಮ್ಮನಿದ್ದನು.

ರಾತ್ರಿ ಸಮಯದಲ್ಲಿ ಅವಳ ಮಂಚದ ಹತ್ತಿರ ಒಂದು ಪಕ್ಕಕ್ಕೆ ಕುಳಿತು ಸ್ವಲ್ಪ ನಿದ್ದೆ ಹೋಗುವನು. ಆಗ ನಾನು ಎಚ್ಚರದಿಂದ ಇರುತ್ತಿದ್ದ. ಅವನು ಎದ್ದು ಕುಳಿತಾಗ ನಾನು ಸ್ವಲ್ಪ ನಿದ್ದೆ ಮಾಡುತ್ತಿದ್ದೆ. ಅವಳು "ಮಾವಾ" ಎಂದು ಕೂಗಿದಾಗ "ಅಮ್ಮಾ ಇಲ್ಲೇ ಇದ್ದೇನಮ್ಮ" ಎಂದು ಹೇಳಿ ಸಮಾಧಾನ ಮಾಡುವನು. ಕೂಡಲೇ ಅವಳು ಮತ್ತೆ ಕಣ್ಣು ಮುಚ್ಚಿ ಎಚ್ಚರವಿಲ್ಲದೆ ಮಲಗಿ ಬಿಡುವಳು. ಹೀಗೆ ಸತ್ಯಂ ಬಡವಾಗುತ್ತಿರುವುದನ್ನು ರಾಜಮ್ಮ ನೋಡಿ ಬಹಳ ನೊಂದುಕೊಂಡಳು. ಅವಳ ಆಂತರಿಕ ವೇದನೆ ನನಗೂ ಅರ್ಥವಾಯಿತು. ಆದರೆ ಈ ವಿಪತ್ತಿನಿಂದ ನಾವು ಹೇಗೆ ಪಾರಾಗುವುದೆಂದು ಯೋಚಿಸಿದೆ. ಅವನನ್ನು ಎಷ್ಟು ಬಗೆಯಿಂದ ಸಮಾಧಾನಗೊಳಿಸಿದರೂ ದಾರಿ ಇಲ್ಲದಂತಾಯಿತು.

ರಾಜಮ್ಮನ ವೇದನೆ ಹೆಚ್ಚಿತು. ತನ್ನ ಮಗಳ ಮಂಗಳಸೂತ್ರಕ್ಕೆ ಎಲ್ಲಿ ಅಪಾಯ ಬರುವುದೋ ಎಂದು ಮನಸಾ ಯೋಚಿಸಿದಳು. ಆಗಲೇ ರುಕ್ಮಿಣಿಯನ್ನು ನೋಡಲು ಬಂದ ಸುಂದರಮ್ಮನೆದುರು ನಿಂತು ನಮ್ಮೆಲ್ಲರಿಗೆ ಕೇಳಿಸುವಂತೆ ಅಳಿಯ ಮಂಚಕ್ಕೆ ಆತುಕೊಂಡು ಕುಳಿತವರು ಏಳುವದೇ ಇಲ್ಲವಮ್ಮಾ. ಹಡೆದ ಮಕ್ಕಳಿಗಿಂತಲೂ ರುಕ್ಮಿಣಿಗೆ ಉಪಚಾರ ಮಾಡುತ್ತಿದ್ದಾರೆ. ಊಟ ಇಲ್ಲ; ನಿದ್ದೆ ಇಲ್ಲ. ಹೀಗೆ ಬಡವಾಗತೊಡಗಿದರೆ ಅವರಿಗೆ ಯಾವ ಬೇನೆ ಬರುವುದೋಯೆಂದು ನನಗೆ ಗಾಬರಿಯಾಗತೊಡಗಿದೆ. ನನ್ನ ಮಗಳ ಮಾಂಗಲ್ಯದ ಅದೃಷ್ಟ ಹೇಗೆದಿಯೋ. ಒಬ್ಬಳೇ ಮಗಳೆಂದು ನೋಡಿ ನೋಡಿ ಈ ಸಂಬಂಧ ಬೆಳಿಸಿದೆ. ಗಂಡ-ಹೆಂಡತಿ ಇಬ್ಬರೂ ಮುದ್ದಾಗಿ ಸುಖದಿಂದ ಇರುವರೆಂಬು ನನ್ನ ಎಣಿಕೆಯಾಗಿತ್ತು. ಇವರ ತಾಯಿ ಕಾಂತಂ ಇದ್ದಷ್ಟು ದಿನವೂ ಅದೊಂದು ರಾಧ್ಯಾಂತವೇ ಆಗಿ ಹೋಯಿತು. ಅವಳು ಇವರನ್ನು ಕಾಡಿ, ಪೀಡಿಸಿ, ನೋಯಿಸಿ ಪ್ರಾಣ ಬಿಟ್ಟಳು. ಆ ಶನಿ ದೂರಾಯಿತೆಂದರೆ, ಈ ಶನಿ ಬೇರೇ ಗಂಟು ಬಿತ್ತು. ಇದೆಂದು ಮುಗಿಯುತ್ತೋ ನನಗಂತೂ ತಿಳಿಯದಂತಾಗಿದೆ. ನನ್ನ ಮಗಳ ಹಣೆಯಲ್ಲಿ ಸುಖಾಂಬೋದು ಬರೆದಿದೆಯೋ ಇಲ್ಲವೋ ತಿಳಿಯದಾಗಿದೆ. ಸೋದರ ಸೊಸೆಯಂದಿರು ಲೋಕದಲ್ಲಿ ಎಷ್ಟು ಮಂದಿಗೆ ಇಲ್ಲಮ್ಮಾ?

ಇದೇನು ಪ್ರಪಂಚಕ್ಕೆ ಆದರ್ಶವಾಗಿ ನಿಂತ ಸೋದರ ಪ್ರೇಮವೋ ನನಗಂತೂ ಅರ್ಥವಾಗೋದಿಲ್ಲ. ಹೀಗೆ, ಈ ಹುಡುಗಿ ಇನ್ನೂ ಹತ್ತು ದಿನಗಳು ಮಲಗಿದ್ದಳೆಂದರೆ ನನ್ನ ಅಳಿಯಾ, ಖಂಡಿತ ಜೀವಂತ ಉಳಿಯಲಾರರು. ನಾನು ಈ ವಿಪತ್ತಿನಿಂದ ಬೇಗ ಪಾರು ಮಾಡೆಂದು ದೇವರನ್ನು ಬೇಡಿಕೊಳ್ಳು ತ್ತಿದ್ದೇನೆ."

ಪಕ್ಕದ ಕೋಣೆಯಲ್ಲಿ ನಾನು ರುಕ್ಮಿಣಿಯ ಮಂಚದ ಹತ್ತಿರ ಕುಳಿತು ಈ ಮಾತುಗಳೆಲ್ಲವನ್ನು ಕೇಳುತ್ತಲಿದ್ದೆ. ನನಗೆ ಮೈ ಉರಿದುಕೊಂಡು ಬಂತು. ಇಂಥ ಸಮಯದಲ್ಲಿ ಈ ಅವಿವೇಕಿ ಹೆಣ್ಣು ಆಡುವ ಮಾತುಗಳಿಂದು ನನಗೆ ಮನಸ್ಸಿನಲ್ಲಿ ಬಲು ನೋವಾಯಿತು. ಬಲು ಬಳಲಿದ ಹುಡುಗಿಯ, ಹೀಗೆ ಹಾಸಿಗೆ ಹಿಡಿದು ಮಲಗಿದ ನನ್ನ ರುಕ್ಮಿಣಿಯ ಬಗ್ಗೆ ಈ ಬಗೆಯ ಮಾತು ಗಳನ್ನು ಆಡುವ ಕ್ರೂರ ಮನಸ್ಸು ಇವಳಿಗೇಕೆ ದೇವರು ಕೊಟ್ಟನೆಂಬುದು ನನಗೆ ತಿಳಿಯಲಿಲ್ಲ. ಏನೂ ಅರಿಯದ ರುಕ್ಮಿಣಿ ಈ ಮುದುಕಿಗೆ ಮಾಡಿದ ಅಪ ರಾಧವಾದರೂ ಏನು ? ಸೋದರ ಸೊಸೆಯಾದ ಅವಳಿಗೆ ಮಾವನಿಂದ ಆರೈಕೆ ಪಡೆಯುವ ಅಧಿಕಾರವಿಲ್ಲವೇ ? ಆ ನನ್ನ ಮಗಳನ್ನು ಶನಿಯೆಂದು ಶಪಿಸುವ ಬಾಯಿ ಯಾವರೂ ಇವಳಿಗೆ ಹೇಗೆ ಬಂತು ? ಈ ಮುದಿ ಪಿಶಾಚಿಗೆ ? ನನ್ನ ಶರೀರವೆಲ್ಲವೂ ತಾಪದಿಂದ ಬೆಂದು ಹೋಯಿತು. ನನ್ನ ಅವಸ್ಥೆ ನನಗೇ ತಿಳಿಯುವಂತಿರಲಿಲ್ಲ. ನನ್ನನ್ನು ನಾನೇ ಮರೆತಂತೆನಿಸಿತು. ಆ ಮುದು ಕಿಯ ಕೊರಳು ಹಿಸುಕಿ ಕೊಂದುಬಿಡಲೇ ಎಂದೆನಿಸಿತು. ನನ್ನ ಮನೆಯ ಈ ಲಕ್ಷ್ಮಿಗೆ ಈ ಬಗೆಯಾಗಿ ಅಪಶಕುನ ನುಡಿಯುವ ಈ ಪಿಶಾಚಿ ನಮಗೆ ಯಮ ಸ್ವರೂಪಿಣಿಯಾದಳೆಂದು ನನ್ನ ತಾಪ ಹೆಚ್ಚಿತು. ಸಂಕಟವನ್ನು ತಡೆಯ ಲಾರದೆ ನಾನು ಆ ಕತ್ತಲಲ್ಲೇ ಆ ಮುದುಕಿಯ ಕೋಣೆಗೆ ಧಾವಿಸಿದೆ. ಆ ಕತ್ತಲಲ್ಲಿ ನಾನು ಹಾಗೆ ಹೋಗುತ್ತಿರುವಾಗ ನನ್ನನ್ನು ಯಾರೋ ತಡೆದಂತೆ ಭಾಸವಾಯಿತು. ನನ್ನೆದುರಿನಲ್ಲಿ ಕಾಂತಂ ನಿಂತು ಕಣ್ಣೀರಿಡುವುದನ್ನು ಕಂಡೆ. ಅವಳ ತಲೆಗೂದಲು ಹರವಿಕೊಂಡಿತ್ತು. ಅವಳು ತನ್ನ ಕೈಯನ್ನು ಬಾಯಿಮುಂದಿಟ್ಟುಕೊಂಡು ಮೂಕತನದಲ್ಲಿಯೇ ಸಂ ಜ್ಞಾ ರೂ ಪ ದ ಲ್ಲಿ ಏನನ್ನೋ ಹೇಳುತ್ತಿರುವಂತೆ ತಿಳಿಯಿತು. ಅವಳು ರುಕ್ಮಿಣಿಯ ಸಧ್ಯದ

ಪರಿಸ್ಥಿತಿಯಲ್ಲಿ ನೀವು ಈ ಧೋರಣೆಯನ್ನು ತಾಳುವುದು ಒಳಿತಲ್ಲ. ಕೊಂಚ ಸುಮ್ಮನಿರಿ. ಸತ್ಯಂ, ನನ್ನನ್ನು, ನಿಮ್ಮನ್ನು, ಮೇಲೆ ರುಕ್ಮಿಣಿಯನ್ನು ಅತಿ ಮಮತೆಯಿಂದ ಪ್ರೀತಿಸುತ್ತಿರುವನು. ಈ ನಿಮ್ಮ ವರ್ತನೆಯಿಂದ ಅವನ ವಿಶ್ವಾಸವನ್ನು ಕಳೆದುಕೊಳ್ಳಬೇಡಿ ಅವನನ್ನು ಈಗ ಬೇನೆಯ ಬೇಗೆಯಲ್ಲಿರುವ ರುಕ್ಮಿಣಿಯನ್ನು ನೋಡಿಯಾದರೂ ಸುಮ್ಮನಿರ್ರಿ." ಎಂದು ಹೇಳಿದಂತೆ ನನಗೆನಿಸಿತು. ಎಂಟು ತಿಂಗಳ ಹಿಂದೆ ನಮ್ಮನ್ನಗಲಿದ ನನ್ನ ಕಾಂತಂ ಅಂದು ಸಾಕ್ಷಾತ್ಕರಿಸಿ ಬಂದುದು ಕನಸಲ್ಲವೆಂಬು ನನಗೆನಿಸಿತು. ನಾನು ಕೊಂಚ ನಿರೀಕ್ಷಿಸಿ ರುಕ್ಮಿಣಿಯ ಕೋಣೆಯತ್ತ ಹೋಗಿನಿಂತೆ. ರುಕ್ಮಿಣಿಗೂ ಕಾಂತಂ ಕಾಣಿಸಿಕೊಂಡಿರಬೇಕು. ಅವಳು "ಅಮ್ಮಾ ಬಂದೆಯಾ ? ಮತ್ತೆ ಹಾಗೆ ಯೇ ಹೋಗಬೇಡ, ನಾನೂ ಬರುವೆನು. ನಿಲ್ಲು, ನಿಲ್ಲಮ್ಮಾ" ಎಂದು ಏಳತೊಡಗಿದಳು. ನಿರ್ಬಲಳಾದ ಅವಳು ಎದ್ದು ಕುಳ್ಳಿರುವುದು ನೋಡಿ ನನಗಾಶ್ಚರ್ಯವೆನಿಸಿತು. ನಾನವಳನ್ನು ಸಮೀಪಿಸಿ ಬೇಡಿಕೊಂಡು ಮಲಗಿಸಬೇಕಾದರೆ ನನಗೆ ಸಾಕು ಸಾಕಾಗಿಹೋಯಿತು. "ಅಮ್ಮಾ ನಾನೂ ಬರ್ತೇನೆ ..." ಎಂದು ಪೇಚಾಡುತ್ತಲೇ ಇದ್ದಳು.

ನಾನು ಮೂಕನಂತೆ ಸುಮ್ಮನೇ ನಿಂತು ಬಿಟ್ಟೆ. ನನ್ನ ಈ ವ್ಯವಹಾರವೆಲ್ಲವೂ ಮೌನದಲ್ಲಿಯೇ ನಡೆಯಿತು. ಹುಡುಗರು ಆತುರದಿಂದ ಮುಂದೇನಾಯಿತೆಂಬುದನ್ನು ತಿಳಿಯಲು ಕಾದಿದ್ದರು. ಅವರು ನನ್ನನ್ನೇ ದುರ ದುರ ನೋಡತೊಡಗಿದರು. ಇದನ್ನು ಕಂಡುಹಿಡಿದ ನನ್ನ ಚಿಕ್ಕಮ್ಮ ಮುಂದಿನ ವಿಷಯವನ್ನು ವಿವರಿಸಿದಳು.

........ರುಕ್ಮಿಣಿಯ ಪರಿಸ್ಥಿತಿ ಹಾಗೇ ಇತ್ತು. ಬೇನೆ ಗುಣಮುಖದ ಮಾರ್ಗವನ್ನು ಹಿಡಿಯಲೇ ಇಲ್ಲ. ಡಾಕ್ಟರುಗಳು ಇಂಜೆಕ್ಶನ್ ಚಿಕಿತ್ಸೆಗೆ ಆರಂಭಿಸಿದರು. ರುಕ್ಮಿಣಿಗೆ ನಡುನಡುವೆ ಎಚ್ಚರ ತಪ್ಪುತ್ತಿದ್ದರೂ ಇತರ ಸಮಯಗಳಲ್ಲಿ ಎಚ್ಚರವಾಗಿಯೇ ಇರುತ್ತಿದ್ದಳು. ಯಾರಾದರೂ ಬಂದರೆ ಮಾತನಾಡಿ, ಗುರ್ತಿಸುತ್ತಿದ್ದಳು. ಇಪ್ಪತ್ತೊಂದು ದಿನದ ವರೆಗೆ ಹೀಗೇ

ಇದ್ದು, ಅಂದು ಅವಳ ಸ್ಥಿತಿ ಸ್ವಲ್ಪ ವಿಷಮಸ್ಥಿತಿಗೆ ಬಂದು, ಆ ನಂತರ ಅವಳ ಜ್ವರ ಗುಣಮುಖವಾಗುವುದೆಂದು ಡಾಕ್ಟರಗಳು ಧೈರ್ಯ ಹೇಳಿದರು.

ರುಕ್ಮಿಣಿಯ ಸೋದರ ಮಾವ ಇಪ್ಪತ್ತೊಂದುದಿನ ಉಪವಾಸ ವನವಾಸ ಮಾಡಿದವನಂತೆ ಬಳಲಿ ಬೆಂಡಾಗಿ ಹೋಗಿದ್ದ. ಮಂಚವನ್ನೇ ಗಟ್ಟಿಯಾಗಿ ಹಿಡಿದು ಕುಳಿತುಬಿಟ್ಟಿದ್ದ. ಅವನನ್ನು ನೋಡಿದರೆ ನನಗೆ ಅಯ್ಯೋ ಯೆನಿಸುತ್ತಿತ್ತು. ಅವನು ಆ ಹುಡಗಿಯ ಮೇಲೆ ತೋರಿದ ಮಮತೆ, ವಿಶ್ವಾಸಗಳಿಗೆ ಮೆಚ್ಚುವನೆಂದು ನನ್ನ ತಿಳಿವಳಿಕೆಯಾಗಿತ್ತು. ದೇವರಿಗೆ ಪ್ರಾರ್ಥನೆಗಳನ್ನು ಸಲ್ಲಿಸಿದರೆ ಆತನು ಕರುಣಿಸುವನೆಂದು ನಾವೆಲ್ಲಾರೂ ದೇವ ದೇವನನ್ನು ಪ್ರಾರ್ಥಿಸಿದೆವು. ಸತ್ಯಂ ಅಷ್ಟು ದಿನ ನಿದ್ರಾಹಾರಾದಿಗಳನ್ನು ತೊರೆದು ತಪಸ್ಸು ಮಾಡಿದ್ದ. ಈ ತಪಸ್ಸು ಫಲಿಸುವುದೆಂದು ನಮ್ಮ ನಂಬಿಕೆಯಾಗಿತ್ತು.

ರುಕ್ಮಿಣಿಯು ಕೂಡ ಧೈರ್ಯದಿಂದಿದ್ದಳು. ನಾವು ಅಧೈರ್ಯದಿಂದ ಕಣ್ಣೀರಿಟ್ಟರೆ, ಅವಳು ನನ್ನನ್ನು ಹತ್ತಿರ ಕರೆದು ಮೇಲೆ ಕೈಹಾಕಿ, ಮುಖಕ್ಕೆ ಮುಖವನ್ನು ತಾಕಿಸಿ "ಯಾಕೆ ಬಾಯಮ್ಮಾ ಅಳುತ್ತೀ ? ನನಗೆ ಜ್ವರ ಬಿಟ್ಟಿದೆ. ಇನ್ನೇನು ಯೋಚನೆ ಬೇಡ ಬೇಗ ಗುಣವಾಗುವುದು " ಎಂದು ಸಮಾಧಾನ ಹೇಳಿದಳು. ಇವಳ ಈ ಮಾತುಗಳನ್ನು ಕೇಳಿ ನಾವು ಅವಾಕ್ಕಾಗಿ ನಿಂತೆವು. ಅವಳ ಮಾತಿನ ಸರಣಿ ಅವಳು ತಾಳಿದ್ದ ಧೈರ್ಯ ನಮ್ಮನ್ನು ಬೆರಗುಗೊಳಿಸಿತು. ಅಂದು ಅವಳೇಕೆ ಇಷ್ಟು ಗಟ್ಟಿ ಮನಸ್ಸಿನಿಂದ ಮಾತನಾಡುತ್ತಿರುವಳೆಂಬುದು ನಮಗೆ ಅರ್ಥವಾಗಲಿಲ್ಲ. ಅವಳ ಮುಖವನ್ನು ನೇವರಿಸಿ, ಗಲ್ಲಗಳನ್ನು ಮುದ್ದಿಟ್ಟುಕೊಂಡೆ. ಅವಳು ನಗುತ್ತ ಸುಮ್ಮನಾದಳು.

ಅವಳು ದಿನಕ್ಕೊಂದು ಸಲವಾದರೂ ರಾಧಾನನ್ನು ಹತ್ತಿರ ಕರೆದು ಅವನ ಗಲ್ಲಗಳನ್ನು ಹಿಡಿದು ಅಲುಗಾಡಿಸಿ "ರಾಧಾ ಅಮ್ಮನ ಮಾತು ನಡೆಯಿಸಿದೆ. ಅವಳ ಆಜ್ಞೆ ನೆರವೇರಿಸಿದೆ. ದೇವಿಯನ್ನು ಪ್ರಾರ್ಥಿಸಿ, ನಿನ್ನನ್ನು ಸಾವಿನ ದವಡೆಯಿಂದ ಉಳಿಸಿಕೊಂಡೆ. ನನ್ನ ಕೆಲಸ ನಿರ್ವಹಿಸಿದೆ. ನನಗಿ

ನ್ನೇನು ಬೇಕು ? " ಎಂದು ಆಡಿಕೊಳ್ಳುತ್ತಿದ್ದಳು. ಹುಡುಗರೆಲ್ಲರನ್ನೂ ಕಂಡು ಮಾತನಾಡಿಸುತ್ತಿದ್ದಳು. ರಾಧಾನನ್ನು ಕಂಡಾಗ ಮಾತ್ರ ಅವಳ ಎದೆ ಯುಬ್ಬಿ ಹೋಗುತ್ತಿತ್ತು, ಮುಖವು ಅರಳಿ ವಿಕಾಸಗೊಳ್ಳುತ್ತಿತ್ತು ಮತ್ತು ಆನಂದದ ತೃಪ್ತಿ ಅವಳ ಮುಖದಲ್ಲಿ ಒಡೆದು ಕಾಣುತ್ತಿತ್ತು. ಅಂತಹ ಬೇನೆ ಯಲ್ಲಿಯೂ ಅವನೆಂದರೆ ಅವಳಿಗೆ ಪಂಚಪ್ರಾಣ........ಎಂದು ಅವಳು ಹೇಳಿದ ಕೂಡಲೇ ಸತ್ಯಂ ನಡುವೆ ಏನನ್ನೋ ನೆನಪಿಗೆ ತಂದುಕೊಂಡು ಹೀಗೆ ಹೇಳ ತೊಡಗಿದ.

"........ರುಕ್ಮಿಣಿ ರಾಧಾಕೃಷ್ಣನನ್ನು ಅಷ್ಟೊಂದು ಅಕ್ಕರೆಯಿಂದ ಪ್ರೀತಿ ಸುವುದಕ್ಕೆ ಕಾರಣವು ನಿಮಗೆ ತಿಳಿದಿರಲಿಕ್ಕಿಲ್ಲ. ಆದರೆ ನನಗೆ ಆ ರಹಸ್ಯ ಚನ್ನಾಗಿ ತಿಳಿದಿದೆ. ಒಂದು ದಿನ ಅವಳೇ ನನಗೆ ಹೇಳಿದಳು." ಮಾವಾ, ನಿಮಗೆ ಯಾರಿಗೂ ತಿಳಿಯದ ವಿಷಯ ಅದು. ಅಮ್ಮಗೆ ಆಗ ಇನ್ನೂ ಪೂರ್ಣ ಎಚ್ಚರ ಇತ್ತು. ಅವಳು ನನ್ನನ್ನು ಹತ್ತಿರ ಕರೆದು ಕೆಲವು ವಿಷಯಗಳನ್ನು ಹೇಳಿದಳು. "ರುಕ್ಮಿಣಿ ನೀನು ನನ್ನ ಈ ಮಾತುಗಳಲ್ಲಿ ಕೊಂಚ ಲಕ್ಷ್ಯ ಇಡು. ನಿನ್ನ ತಾಯಿಯ ಕೊನೆಯ ಸಂದೇಶ ಇದು. ಮಕ್ಕಳ ಮೇಲೆ ಪ್ರೇಮವನ್ನು ತೋರಿಸುವ ವ್ಯಕ್ತಿ ಸ್ತ್ರೀಯಾಗಲಿ, ಗಂಡಸಲ್ಲ. ಅವರಿಗೆ ಸಂಪಾದಿಸುವುದೊಂದೇ ತಿಳಿಯುವುದು ಅಷ್ಟೆ! ಮಕ್ಕಳನ್ನು ಪ್ರೇಮ ಆದರ ಗಳಿಂದ ಬೆಳೆಯಿಸಬಲ್ಲ ವ್ಯಕ್ತಿ ಸ್ತ್ರೀಯೊಬ್ಬಳೇ. ಸ್ತ್ರೀಯಿಂದ ಆಗಬಹುದಾದ ತ್ಯಾಗ ಪುರುಷನಿಂದ ಆಗಲಾರದು. ಹೆಣ್ಣು ತೋರಿಸುವ ಸಹನೆ, ಸಾಹಸ, ಸ್ಥೈರ್ಯ ಗಂಡು ತೋರಿಸಲಾರ. ಅವನೆಂದೂ ಸ್ತ್ರೀಯನ್ನು ಈ ಗುಣಗಳ ಗ್ರಹಣದಲ್ಲಿ ಜಯಿಸಲಾರ. ಸ್ತ್ರೀ ಪ್ರೇಮಸ್ವರೂಪಳು. ತಾಯಿ, ನೀನು ಅಂತಹ ಹೆಣ್ಣಾಗಿ ಬೆಳೆಯಬೇಕು. ಮತ್ತೊಂದು ಮಾತು; ಶಾಸ್ತ್ರೀ, ಪಾಪಾ, ಮತ್ತು ಸುಶೀಲೆ ಇವರುಗಳ ಬಗ್ಗೆ ನನಗೇನೂ ಭಯವಿಲ್ಲ. ರಾಧಾ ಕೃಷ್ಣ, ಇನ್ನೂ ಚಿಕ್ಕವನು; ಅವನೇ ಕಡೆಯವನು; ಅವನೆಂದರೆ ನನಗೆ ಹೆಚ್ಚು ಪ್ರೇಮ. ನನ್ನ ಪಂಚಪ್ರಾಣಗಳೂ ಇವನಲ್ಲಿ ಅಡಗಿರುವವು. ಇವ ನನ್ನು ನೋಡಿಕೊಳ್ಳುವ ಭಾರ ಯಾರಿಗೆ ಒಪ್ಪಿಸುವುದೆಂದು ಯೋಚಿಸ್ತಾ

ಇದ್ದೇನೆ. ಆ ಕಾರ್ಯ ಯಾರಿಗೆ ಭಗವಂತನ ಪ್ರೇರಣೆಯಿಂದ ನಡೆಸುವ ಭಾಗ್ಯ ಬರುವುದೋ ತಿಳಿಯೆ."

ನಿಮ್ಮ ಅಜ್ಜಿ "ಕಾಂತಂ ನಮ್ಮ ವಂಶದಲ್ಲಿ ತಲೆತಲೆಗಳಿಂದ ಒಂದೇ ಗಂಡು ಸಂತಾನದಿಂದಲೇ ಮನೆತನ ನಡೆದುಬಂದಿದೆ. ಎರಡು ಗಂಡುಸಂತಾನ ಒಂದ ಮನೆತನ ಬೆಳೆಯುವ ಸಂಪ್ರದಾಯ ನಮ್ಮ ವಂಶಕ್ಕೆ ಹೊಸದು. ಆದರೆ ಕಾಂತಂ ನಿನ್ನ ಹೊಟ್ಟೆ ಪುಣ್ಯದಿಂದ ನಮ್ಮ ಮನೆತನಕ್ಕೇ ಅಧಿಕ ಪುತ್ರಸಂತಾನ ಒದಗಿಬಂದಿದೆ. ಸತ್ತುಹೋಗಿರುವ ನಿನ್ನ ಅತ್ತೆ, ಮತ್ತು ನಾನು ಸಂತೋಷಪಡುತ್ತೇವಮ್ಮಾ. ಅಲ್ಲದೆ ನಮ್ಮ ವಂಶದವರೆಲ್ಲರೂ ಹಿಗ್ಗುವರು." ಎಂದು ಅತಿ ಪ್ರೇಮದಿಂದ ನಿಮ್ಮ ಅಜ್ಜಿ ಹೇಳಿದರು.

"ನಾನೂ ಶ್ರೀಕೃಷ್ಣಭಗವಂತನನ್ನು ಬೇಡಿಕೊಂಡೆ. ನನಗೆ ಇಬ್ಬರು ಗಂಡು ಸಂತಾನವಾಯಿತು. ಇವನು ವರಪ್ರಸಾದದಿಂದ ಜನಿಸಿದವನು. ನಮ್ಮ ವಂಶವನ್ನು ವೃದ್ಧಿ ಮಾಡಲು ಜನ್ಮತಾಳಿರುವನು. ಆದುದರಿಂದಲೇ ಇವನ ಮೇಲೆ ನನಗೆ ಹೆಚ್ಚು ಮಮತೆ. ತಾಯಿ, ರುಕ್ಮಿಣಿ ಇವನ ವಿಷಯವಾಗಿಯೇ ನಾನು ನಿನಗೆ ಹೆಚ್ಚು ಹೇಳಬೇಕಾಗಿದೆ. ನನ್ನ ಮಕ್ಕಳಲ್ಲಿ ನೀನೆ ದೊಡ್ಡವಳು; ಜ್ಞಾನವೃದ್ಧಳು. ನಿನಗೆ ಧೈರ್ಯವೂ ಇದೆ. ನಿನ್ನದು ದೃಢವಾದ ಮನಸ್ಸೆಂಬುದು ನನಗೆ ತಿಳಿದಿದೆ. ಆದುದರಿಂದಲೇ ಇವನನ್ನು ನಿನಗೆ ಅರ್ಪಿಸುತ್ತಲಿದ್ದೇನೆ. ಇವನನ್ನು ನೀನೆ ಪಾಲಿಸಿ ದೊಡ್ಡವನನ್ನಾಗಿ ಮಾಡಬೇಕು; ಇವನನ್ನು ನಿನ್ನ ಸ್ವಾಧೀನ ಮಾಡಿದೆನೆಂದರೆ ನನಗೆ ಇವನ ಕುರಿತು ಚಿಂತೆಯೇ ಇಲ್ಲ. ನನ್ನ ಪ್ರಾಣಗಳು ನಿಶ್ಚಿಂತವಾಗಿ ಹೋಗುವವು" ಎಂದು ಹೇಳಿದಳು. ನಾನು ಅತಿ ದುಃಖದಿಂದ ತಾಯಿಯ ಪಾದಗಳನ್ನು ಕಣ್ಣಿಗೆ ಅದ್ದಿಕೊಂಡು ಹಾಗೇ ಮಾಡುತ್ತೇನಮ್ಮಾ ಎಂದು ಹೇಳಿ ಆ ಕೂಸಿನನ್ನು ಎತ್ತಿಕೊಂಡೆ" ಎಂದು ರುಕ್ಮಿಣಿ ಹೇಳಿದಳು....... ಎಂದು ಹೇಳಿ ಸತ್ಯಂ ತಲೆತಗ್ಗಿಸಿದ, ದುಃಖದಿಂದ. ಆ ನಂತರ ಡಾಕ್ಟರ್ ಚಲಪತಿರಾಯರು ಹುಡುಗರ ಕಡೆ ನೋಡುತ್ತ ಹೀಗೆ ಹೇಳತೊಡಗಿದರು."

ಂ ಂ ಂ

"... ....ಆದುದರಿಂದಲೇ, ಅವಳು ತನ್ನ ಪ್ರಾಣದ ಮೇಲಿನ ಆಶೆ ತೊರೆದು ಅವನಿಗೆ ಆರೈಕೆ ಮಾಡಿದಳು. ಆ ರೀತಿ ನಿದ್ರೆ, ಆಹಾರಗಳನ್ನು

ತೆರೆದು ರೋಗಿಯನ್ನು ಆರೈಕೆ ಮಾಡಿದರೆ ಬೇನೆ ಬರದೇ ಏನು? ಬೇನೆ ಏನೋ ಬಂದಿತೆಂದರೆ, ಪಥ್ಯ ಪಾನಾದಿಗಳನ್ನು ಮಾಡಿ ಸುಮ್ಮನಿರಬಹುದು. ಬೇನೆ ಬಲಿಯತೊಡಗಿತು. ಅಂತಹ ನಿರ್ಬಲಳಾದ ಹೆಣ್ಣು ಟೈಫಾಯಿಡ್ ರೋಗಿಗೆ ಆರೈಕೆ ಮಾಡಲು ಬಿಟ್ಟಿದುದು ನಮ್ಮದೇ ತಪ್ಪು ಕೆಲಸ. ಅವಳಿಗೆ ಟೈಫಾಯಿಡ್ ಸೋಂಕದೇ ಇರುವ ಇಂಜೆಕ್ಷನ್ ಕೊಡದೇ ಇದ್ದುದು ಎರಡನೆಯ ತಪ್ಪು. ಇನ್ನೇನು ಆ ಇಂಜೆಕ್ಷನ್ ಕೊಡಬೇಕೆಂದೇ ನೆನೆಯುವ ಹೊತ್ತಿಗೆ ಅವಳಿಗೆ ಜ್ವರ ಕಾಣಿಸಿಕೊಂಡಿತು. ಈ ಬೇನೆ ನಮ್ಮ ಸ್ವಾಧೀನಕ್ಕೆ ಬರಲಿಲ್ಲ. ಇದಲ್ಲದೆ ಡಾಕ್ಟರ್ ರಾಮರಾಯರು ಕ್ವಿನೈನು ಹೆಚ್ಚಿನ ಡೋಸು ಕೊಡಬಾರದಾಗಿತ್ತು; ಇದೆಲ್ಲಾ ವಿಧಿಯ ಆಟ. ಯಾರನ್ನು ಅಂದೇನು ಪ್ರಯೋಜನ? ಹೀಗೆಂದು ಹೇಳಿ ಡಾಕ್ಟರರು ಕೂಡಲೇ ಅವರ ಮಾತನ್ನು ಮುಂದುವರಿಸುತ್ತ ಪಂಕಜಮ್ಮ ಹೀಗೆ ಹೇಳಿದಳು.

o o o

......ಇದರಲ್ಲಿ ಯಾರದೂ ತಪ್ಪಿಲ್ಲವಪ್ಪ. ನಾವೇನೋ ಹಾಗೆ ಇದ್ದರೆ, ಹೀಗೆ ಆಗಿದ್ದರೆ ಎಂದು ಆಡಿಕೊಳ್ಳುತ್ತೇವೆ; ನಮ್ಮ ಸಮಾಧಾನಕ್ಕೆ. ಕ್ವಿನೈನ್ ಕೊಟ್ಟರೆ ಇಷ್ಟು ಪ್ರಮಾದವಾಗಬೇಕೆಂದು ಎಲ್ಲಿ ಹೇಳಿದೆ. ಅಸಲು ಇದರ ಮೂಲ ತತ್ವ ಯಾರಿಗೂ ತಿಳಿಯದು. ನಾನು ಆ ರಹಸ್ಯವನ್ನು ಯಾರಿಗೂ ಹೇಳಿಲ್ಲ. ತಿಳಿದಿದ್ದರೂ ನಿವೇನೂ ಮಾಡುವುದಕ್ಕೆ ಆಗುತ್ತಿರಲಿಲ್ಲ. ಆದುದರಿಂದ ಇವತ್ತು ಆ ವಿಷಯ ಹೇಳುತ್ತೇನೆ; ಕೇಳಿಕೊಳ್ಳಿ.

ಒಂದು ದಿನ ರಾಧಾಕೃಷ್ಣನಿಗೆ ಹೆಚ್ಚು ಜ್ವರ ಬಂದಿತ್ತು. ಆ ದಿನ ದೇವಿಯನ್ನು ಪ್ರಾರ್ಥಿಸಿದಳು ಎಂದು ಆಗಲೆ ನಿಮಗೆ ಹೇಳಿದೆ; ನೆನಪಿದೆ ತಾನೆ ? ಆ ಪ್ರಾರ್ಥನೆ ಏನೆಂಬುದು ನಿಮಗೆ ತಿಳಿದಿದೆಯೆ ?

ರುಕ್ಮಿಣಿ ಅಂದು ಬಹಳ ಆತುರದಿಂದ ನಡೆಯುವುದು ನೋಡಿ ನನಗೆ ಆಶ್ಚರ್ಯವೆನಿಸಿತು. ಅಂದು ಆ ದೇವಿಯ ಪ್ರಾರ್ಥನೆಯಲ್ಲಿ ಅವಳು ತೋರಿದ ಆಸಕ್ತಿ, ಶ್ರದ್ಧೆಯನ್ನು ನಾನು ಕಂಡು ಆಶ್ಚರ್ಯಹೊಂದಿದೆ. ದೇವಿಯಲ್ಲಿ ಎಷ್ಟೊಂದು ವಿಶ್ವಾಸವಿದೆಯೆಂದು ನಾನು ಚಕಿತಳಾದೆ. ಆ ದಿನ ಅವಳು ದೇವಿಯ ಮುಂದೆ ಏನನ್ನು ಬೇಡುವಳೋ, ಯಾವ ರೀತಿ ಕೇಳಿಕೊಳ್ಳುವಳೋ

ಯೆಂಬುದನ್ನು ತಿಳಿಯಬೇಕೆಂದು ನಾನು ಬಾಗಿಲ ಹತ್ತಿರವೇ ಮರೆಯಾಗಿ ನಿಂತು ಕೇಳಿದೆ. ತಲೆ ಕೂದಲು ಕೊಡುವೆನೆಂದು ಹರಕೆ ಕೊಡುವಳೆಂದು ಭಾವಿಸಿದೆ. ಮೈಮೇಲಿನ ಆಭರಣವನ್ನು ತೆಗೆದಿಟ್ಟು ಮುಡುಪು ಮಾಡುವ ಳೆಂದು ನೆನೆದೆ. ಆದರೆ ಅವಳ ಆಗಿನ ಸಾಹಸದ ಬೇಡಿಕೆ ಕೇಳಿ ನನ್ನೆದೆ ನೀರಾಯಿತು. ಕಿವಿ ಕಿವುಡಾಯಿತು. ಕಣ್ಣು ನಂಬದಾಯಿತು. ಅವಳು ಹೀಗೆ ಬೇಡಿಕೊಂಡಳು. "ದೇವಿ! ನಾನು ಪ್ರತಿ ಶುಕ್ರವಾರವೂ ತಪ್ಪದೆ ಪೂಜೆ ಮಾಡಿ ನನ್ನ ತಮ್ಮನಿಗೆ ಆರೋಗ್ಯ, ಆಯುಷ್ಯ ಕೊಡೆಂದು ಬೇಡಿ ಕೊಂಡೆ. ಶನಿವಾರಗಳಲ್ಲಿ ಉಪವಾಸಗಳನ್ನೂ ಮಾಡಿದೆ. ವೆಂಕಟೇಶ್ವರ ನಿಗೆ ನನ್ನ ತಲೆ ಕೂದಲುಗಳನ್ನು ಕೊಡುವೆನೆಂದು ಹರಕೆ ಹೊತ್ತೆ. ನನ್ನ ಆಭರಣಗಳೆಲ್ಲವನ್ನೂ ನಿನ್ನ ಪೂಜೆಗಾಗಿ ವಿನಿಯೋಗಿಸುವೆನೆಂದು ಮುಡುಪು ಹೇಳಿದೆ. ಬಂಗಾರದ ವಿಗ್ರಹಗಳನ್ನು ಮಾಡಿಸಿ ಮುತ್ತೈದೆಯರಿಗೆ ದಾನ ಮಾಡುವೆನೆಂದು ಒಪ್ಪಿಕೊಂಡೆ. ಇಷ್ಟಾದರೂ ನಿನಗೆ ದಯೆ ಬರಲಿಲ್ಲ. ಇವು ಗಳು ಯಾವೂ ನಿನಗೆ ರುಚಿಸಲಿಲ್ಲವೆಂದು ಕಾಣುತ್ತದೆ. ನಿರಂತರವೂ ನಿನ್ನ ಪೂಜೆಯಿಂದ ಪವಿತ್ರವಾದ ಈ ದೇಹವನ್ನು, ನನ್ನನ್ನೇ ನಿನಗೆ ಅರ್ಪಿಸು ತ್ತೇನೆ ಮಹಾ ತಾಯಿ! ದೇವಿ ನನ್ನ ಪ್ರಾಣಗಳನ್ನು ತೆಗೆದುಕೋ, ತಮ್ಮ ನನ್ನು ಜೀವಂತ ಉಳಿಸು. ನನ್ನ ತಮ್ಮನನ್ನು, ನಮ್ಮ ವಂಶೋದ್ಧಾರಕ ನನ್ನು ಉಳಿಸು ತಾಯಿ; ಮಹಾ ಮಾತೆ! ನಿನಗೆ ಇನ್ನಾದರೂ ದಯೆ ಬಾರದೆ ?ಅವನ ಪ್ರಾಣಕ್ಕೆ ಬದಲಾಗಿ ನನ್ನ ಪ್ರಾಣಗಳನ್ನು ನಿನಗೆ ಅರ್ಪಿಸು ತ್ತೇನೆ. ನನ್ನ ಈ ಅರ್ಪಣೆಯನ್ನು ಧಾರಾಳವಾಗಿ ಸ್ವೀಕರಿಸಿ, ನನ್ನ ತಮ್ಮ ನನ್ನು ನಮ್ಮ ತಂದೆಯ ವಂಶಕ್ಕೆ ದಾನ ಮಾಡು ತಾಯಿ." ಎಂದು ಪ್ರಾರ್ಥಿಸಿ ದಳು.

ಅವಳಿಗೆ ತಿಳಿಯದಂತೆ ಇದೆಲ್ಲಾ ನಾನು ಮರೆಯಲ್ಲಿ ನಿಂತು ಕೇಳಿದೆ. ಅವಳನ್ನು ತಡೆಯುವುದು ನನ್ನಿಂದ ಆಗಲಿಲ್ಲ. ಏನು ಮಾಡುವುದೆಂದು ಸುಮ್ಮ ನಿದ್ದೆ. ದೇವಿ ಕರುಣಾ ಸ್ವರೂಪಳಲ್ಲವೇ ? ಅವಳೆಂದಿಗೂ ನಮ್ಮ ರುಕ್ಮಿಣಿಗೆ ಅನ್ಯಾಯವನ್ನು ಮಾಡಲಾರಳೆಂದು ದೇವಿ ಇವಳ ಜೀವನವನ್ನೇ ಎರವಾಗಿ ಪಡೆಯುವಳೆಂದು ನಾನು ಭಾವಿಸಲಿಲ್ಲ. ರಾಧಾಕೃಷ್ಣನಿಗೆ ಜೀವದಾನ

ಮಾಡಿ, ಆತನ ಜೀವಕ್ಕೆ ಬದಲು ತನ್ನ ಜೀವನನ್ನೇ ಕೊಡುವೆನೆಂದ. ರುಕ್ಮಿಣಿ ಹೇಳಿದ ಮಾತ್ರಕ್ಕೆ, ಭಕ್ತಳ ಜೀವನನ್ನೇ ತೆಗೆದುಕೊಳ್ಳುವಳೆಂದು ನಾನು ನೆನೆಯಲಿಲ್ಲ. ಇಂತಹ ನಿರ್ಮಲ, ನಿಶ್ಚಲವಾದ ತ್ಯಾಗಬುದ್ಧಿಗೆ ಮೆಚ್ಚಿ, ಈ ಸಂಸಾರದಲ್ಲಿ ಶಾಂತಿ ಸುಖವನ್ನುಂಟು ಮಾಡುವಳೆಂದು ನಾನು ನೆನೆದೆ. ಆದರೆ ಆ ವಿಧಿಯ ನಿಯಮವೇ ಬೇರೆಯಾಗಿತ್ತು. ರುಕ್ಮಿಣಿಯಂತಹ ಮೂರ್ತಿ ದೇವರಿಗೆ ಬೇಕಿತ್ತು ಎಂದು ನನಗೆ ಎನಿಸುತ್ತದೆ.

ಮತ್ತೊಂದು ಮಾತು. ಒಂದು ದಿನ ಮಧ್ಯರಾತ್ರಿ ಕಳೆದ ಮೇಲೆ ಒಂದು ಗಂಟೆ ಸಮಯ ಅವಳು ನನ್ನನ್ನು ಹತ್ತಿರ ಕರೆದು ಹೀಗೆ ಹೇಳಿದಳು. "ಚಿಕ್ಕಮ್ಮ ನನಗೆ ಕರೆಬಂದಿದೆ; ಕಾಗದ ಬಂದಿದೆ; ನಾನು ಹೋಗಲೇಬೇಕಾಗಿದೆ; ನನ್ನ ಪ್ರೀತಿಯ ತಾಯಿ ಕರೆಯುತ್ತಿದ್ದಾಳೆ. ದೇವಿಯು ಕೂಡ ನನ್ನ ಬೇಡಿಕೆಗೆ ಸಮ್ಮತಿಯನ್ನಿತ್ತಿರುವಳು. ನಾನು ಹೋಗಿಬರುತ್ತೇನೆ" ಎಂದು ಹೇಳಿದಳು. ನಾನು ಕಂಣಲ್ಲಿ ನೀರುತಂದುಕೊಂಡು "ತಾಯಿ ಹಾಗೆ ಹೇಳಬೇಡ; ನೀನು ಈ ರೀತಿ ಮಾತನಾಡುವುದು ಶುಭವಲ್ಲ; ಅಧೈರ್ಯಪಡಬೇಡ. ನಿನಗೇಕೆ ಭಯ? ನಿನ್ನ ಮಾವ ನಿನಗೆ ದಿನ ಹಗಲೂ ನಿಂತು ಶುಶ್ರೂಷೆ ಮಾಡುತ್ತಿದ್ದಾನೆ. ಅವನಲ್ಲದೆ ಬೇರೇ ಇಬ್ಬರು ಡಾಕ್ಟರುಗಳು ನಿನ್ನನ್ನು ಆರೈಸುತ್ತಿರುವರು. ಇನ್ನೇಕಮ್ಮಾ ಭಯ?" ಎಂದು ನಾನು ಸಮಾಧಾನದ ಮಾತು ಹೇಳಿದೆ.

ರುಕ್ಮಿಣಿ ನನ್ನ ಮಾತುಗಳ ಕಡೆ ಲಕ್ಷ್ಯ ಕೊಡದೆ ಮತ್ತೆ ನನ್ನ ಕಡೆ ನೋಡಿ "ತಾಯಿ, ಮಾವನವರಿಗೆ ನನ್ನ ಮೇಲಿರುವ ಪ್ರೇಮದ ಕಾರಣ ನಿನಗೆ ತಿಳಿದಿದೆಯೆ? ನನ್ನ ತಂದೆಯವರಿಗೆ ತಿಳಿದಿದೆ. ಅದು ಇಂದಿಗೆ ಹದಿನೈದು ವರುಷದ ಮಾತು. ಭೂಮಿಯಲ್ಲಿ ತಾಯಿಯ ಹೊಟ್ಟೆಯಿಂದ ಹೊರ ಬಂದಾಗ ನಾನು ಮೊದಲು ಕಣ್ಣುತೆರೆದು ನೋಡಿದ್ದು ಅವರನ್ನು. ನಾನು ನೇರವಾಗಿ ಆತನ ಅಮೃತ ಹಸ್ತದಲ್ಲಿಯೇ ಬಿದ್ದೆನಂತೆ. ಅಂದಿನಿಂದ ನಾನೆಂದರೆ ಆತನಿಗೆ ತನ್ನ ಸ್ವಂತ ಮಗಳಂತೆ ಪ್ರೀತಿಸುತ್ತ ಬಂದಿರುವರು. ಹಾಗೆಯೇ ನನಗೂ ಅವರೆಂದರೆ ಹೆಚ್ಚು ಆದರ. ನಾನು ಕೈಕೂಸಾಗಿರುವಾಗ ನನ್ನನ್ನು ಆಡಿಸಿ, ಜೋತಟ್ಟಿ ಲಾಲಿಸಿದನಂತೆ. ನನಗೆ ಅನ್ನಪ್ರಾಶನ

ಮೊದಲು ಮಾಡಿಸಿದ್ದು ಆತನೆ; ಇದು ನಿಜವಾದ ರಹಸ್ಯ. ನನ್ನ ಕೊನೆಯ ಇಚ್ಛೆ ಒಂದೇ ಇದೆ. ಸಾಯುವಾಗ ಆ ನನ್ನ ಮಾವನನ್ನು ನೋಡುತ್ತ ಕಣ್ಣುಮುಚ್ಚಬೇಕೆಂದಿದೆ'' ಎಂದಳು.

ಆ ಮಾತಿಗೆ ನಾನು ''ಹುಚ್ಚು ಹುಡುಗಿ, ಇಂತಹ ಮಾತುಗಳನ್ನು ಆಡಬಾರದಮ್ಮಾ! ಇದೇನು ನಿನಗೆ ಹುಚ್ಚು ಹಿಡಿದಿದೆ ಏನು? ಹಾಗೆ ನೀನು ಆ ರೀತಿ ಪ್ರೀತಿಸ್ತಾ ಇದ್ದ ನಿನ್ನ ಮಮತೆಯ ಮಾವನನ್ನು ಬಿಟ್ಟುಹೋಗಲು ಮನಸ್ಸು ಹೇಗೆ ಆಗುತ್ತೆ? ಹೇಳು. ಇಂತಹ ಕೆಟ್ಟಯೋಚನೆಗಳನ್ನು ನಿನ್ನ ಮನಸ್ಸಿನಲ್ಲಿ ಈಗ ತಂದುಕೊಳ್ಳಬಾರದಮ್ಮ, ಸುಮ್ಮನಿರು" ಎಂದೆ.

ಆದರೆ ಅವಳು ''ದೇವಿಯ ಆಜ್ಞೆ! ನನ್ನ ಪ್ರಾಣಗಳನ್ನು ಆ ದೇವಿಗೆ ಆಗಲೇ ಕಾಣಿಕೆಯಾಗಿ ಕೊಟ್ಟುಬಿಟ್ಟಿದ್ದೇನೆ" ಎಂದು ಹೇಳಿದಳು. ಅವಳ ಈ ಕೆಟ್ಟ ನುಡಿಗೆ ನಾನು ''ಸುಮ್ಮನಿರಮ್ಮ ಅಂದ್ರೆ, ಆ ನಿನ್ನ ದೇವಿ ನಮ್ಮ ಪ್ರಾರ್ಥನೆಗಳನ್ನು ಸಹ ಕೇಳುವಳಲ್ಲವೆ? ಕೇಳುತ್ತಾಳೆ. ನಾವು ಸಮಸ್ತರೂ ನಿನಗೆ ಆರೋಗ್ಯವಾಗಬೇಕೆಂದು ಆ ಮಹಾದೇವಿಯನ್ನು ನಿರಂತರ ಪ್ರಾರ್ಥಿಸುತ್ತಲಿದ್ದೇವೆ" ಎಂದೆ.

ರುಕ್ಮಿಣಿ ಮತ್ತೆ ತನ್ನ ಹಿಂದಿನ ಸರಣಿಯಲ್ಲಿ, ''ನಾನು ಜೀವಂತ ಉಳಿದರೆ ಮಾವ ಹೆಚ್ಚು ಸಮಯ ನಮ್ಮ ಮನೆಗೆ ಬಂದೇತೀರಬೇಕಾಗುತ್ತದೆ. ಅಮ್ಮ ಕೂಡ ನಮ್ಮನ್ನು ಅಗಲಿಹೋಗಿದ್ದಾಳೆ. ಆ ಮುದುಕಿ ಅಜ್ಜಿ ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ. ಅವರ ಮನೆಯಲ್ಲಿ ಇರುವುದೊಂದು ಅವ ರತ್ತೆ. ಮಹಾಕೋಪಿಷ್ಟೆ. ನಮ್ಮ ಮನೆಯಲ್ಲಿ ಏನೇ ಕಾರ್ಯವಾದರೂ ಮಾವ ನಮ್ಮ ಮನೆಗೆ ಬರಲೇಬೇಕಾಗುತ್ತದೆ. ಆತಗೆ ಬಹಳ ತೊಂದರೆ. ನನ್ನಲ್ಲಿ ಮಾವ ಹೆಚ್ಚು ಮಮತೆ ವಿಶ್ವಾಸತೋರಿದರೆ ನಮ್ಮ ಮನೆಗೆ ಬಂದು ಉಪಚಾರ, ನೆರವನ್ನು ನೀಡಿದರೆ, ಆ ಮುದುಕಿ ಸಹಿಸಳು. ನಮ್ಮ ಮನೆಯಲ್ಲಿ ಉತ್ಸವಾದಿಗಳು ನಡೆದರೆ ಅವಳಿಗೆ ಎದೆ ಉರಿಯುತ್ತದೆ. ನಮ್ಮ ಸೋದರತ್ತೆಯ ಹೊಟ್ಟೆಕಿಚ್ಚು ಹೆಚ್ಚುತ್ತದೆ. ಇದೆಲ್ಲ ದುಃಖ, ಸಂಕಟ, ಅನುತಾಪ, ನನ್ನಿಂದಲೇ ಅಲ್ಲವೆ, ನಮ್ಮ ಮಾವನಿಗೆ? ನಾನು ಜೀವಿಸಿದ್ದು

ನನ್ನನ್ನು ಹೆಚ್ಚಾಗಿ ಪ್ರೀತಿಸುವ ಮಾವನಿಗೆ ದುಃಖವನ್ನುಂಟು ಮಾಡಬೇಕೆ? ನಾನು ಈ ಲೋಕದಿಂದ ಬೇಗ ಹೊರಟುಹೋದೆನೆಂದರೆ ಗಂಡ-ಹೆಂಡಿರ, ನಡುವೆ, ಅಳಿಯ ಅತ್ತೆಯರ, ನಡುವೆ ಮನಸ್ತಾಪವಿರುವುದಿಲ್ಲ. ಈ ಎಲ್ಲ ಯೋಚನೆಗಳಿಂದಲೇ ನಾನು ಅಂದು ನನ್ನ ದೇವಿಯ ಮುಂದೆ ನನ್ನ ಪ್ರಾಣಗಳನ್ನು ಕಾಣಿಕೆಯಾಗಿ ಕೊಟ್ಟುಬಿಟ್ಟಿರುವೆನು.

ನೀನೇ ಹೇಳು ಚಿಕ್ಕಮ್ಮ ನಾನೇತಕ್ಕೆ ಜೀವಿಸಬೇಕು? ಈ ಬೇಸರ, ದುಃಖ, ಮಾನಸಿಕ ತೊಂದರೆ ಮಾವನಿಗೆ ಇನ್ನಿತರ ಹುಡುಗರಿಂದ ಆಗುವುದಿಲ್ಲ ನನ್ನ ಸಾವು ಮಾವನಿಗೆ ಜೀವನದಲ್ಲಿ ಶಾಂತಿ ತಂದುಕೊಡಲು ತೀರ ಆವಶ್ಯ. ನನ್ನನ್ನು ಪ್ರೀತಿಸಿದ ಮಾವನಿಗೆ ನನ್ನಿಂದ ಇಷ್ಟಾದರೂ ಸಹಾಯ ಬೇಡವೆ? ನಾನು ಈ ಲೋಕದಿಂದ ದೂರಾಗುವುದೇ ಒಳಿತೆಂದೆನಿಸುತ್ತದೆ. ಮೇಲೆ ದೇವಿಯ ಆಜ್ಞೆ; ಮಾವನ ಸುಖಜೀವನಕ್ಕೆ ಆಸ್ಪದ. ಈ ಎರಡು ಸುಖ ಕಾರ್ಯಗಳು ನನ್ನ ಸಾವಿನಿಂದಲೇ ಸಾಧಿಸುವುದೆಂದು ನಾನು ಮನಗಂಡಿರುವದರಿಂದ, ನಾನು ಹೋಗಲೇಬೇಕು ಚಿಕ್ಕಮ್ಮ. ನನ್ನನ್ನು ತಡೆಯಬೇಡ. ಈ ಮಂಗಲಪ್ರದವಾದ ಸಾವು, ಸುಮಂಗಲಿಯಾಗಿ ಪಡೆಯುವ ನನ್ನ ಭಾಗ್ಯವೇ ಭಾಗ್ಯ" ಎಂದಳು.

ಅವಳ ಈ ವೇದಾಂತಪೂರ್ಣ ಮಾತುಗಳನ್ನು ಕೇಳಿದಂತಿಲ್ಲ ನಾನು ಮೂಕಳಾದೆ. ನನ್ನ ಹಿತೋಕ್ತಿಗಳನ್ನು ಅವಳು ಈಗ ಕೇಳುವ ಪರಿಸ್ಥಿತಿಯಲ್ಲಿರಲಿಲ್ಲ. ಆವೇಶದ ಈ ಪರಿಸ್ಥಿತಿಯಲ್ಲಿ ನಾನು ಏನು ಹೇಳಿದರೂ ಅವಳಲ್ಲಿ ತಿಳಿದುಕೊಳ್ಳುವ ಪರಿಜ್ಞಾನವಿರಲಿಲ್ಲ..........

ಹೀಗೆ ಪಂಕಜಮ್ಮನವರು ರುಕ್ಮಿಣಿಯ ತತ್ವಪೂರ್ಣ ಮಾತುಗಳನ್ನು ಹೇಳುತ್ತಿರುವಾಗ ಅಲ್ಲಿ ಕುಳಿತಿದ್ದ ಹುಡುಗರು ಬಿಮ್ಮನೇ ಕುಳಿತಿದ್ದರು. ಅವರ ಕಣ್ಣಿನ ನೋಟದಲ್ಲಿ ಮುಂದೆ ಈ ವಿಷಮಯ ಸನ್ನಿವೇಶ ಹೇಗೆ ಕೊನೆಗಂಡಿತೆಂಬುದನ್ನು ತಿಳಿಯುವ ಕುತೂಹಲ ಕಂಡುಬಂತು. ಮುಂದಿನ ಕತೆಯನ್ನು ನಾನೇ ವಿವರಿಸತೊಡಗಿದೆ.

• • •

......ಜ್ವರಬಂದ ಇಪ್ಪತ್ತು ಒಂದನೇ ದಿನದಲ್ಲಿಯೂ ಕೂಡ ಅವಳು ಬಹಳ ಎಚ್ಚರದಿಂದಲೇ ಇದ್ದಳು. ಏಕೆಂದರೆ ಆ ದಿನ ಬೆಳಗಿನ ಝಾವದಲ್ಲಿ ನನ್ನೊಂದಿಗೆ ಅವಳು ಸರಿಯಾಗಿಯೇ ಮಾತನಾಡಿದಳು. ಆದರೆ ಅವಳ ಸ್ವರದಲ್ಲಿ ಸ್ಥಿರತೆ ಮತ್ತು ಏಕರೂಪತೆ ಕಡಮೆಯಾಗಿತ್ತು. ಮಾತುಗಳು ಮಾತ್ರ ಸ್ಪಷ್ಟವಾಗಿಯೂ ಮತ್ತು ತಿಳುವಳಿಕೆಯುಳ್ಳವುಗಳಾಗಿಯೂ ಇದ್ದವು. ನಾನು ಗಾಬರಿಯಿಂದ ಅವಳ ಹತ್ತಿರವೇ ಕುಳಿತುಕೊಂಡರೆ, ತನ್ನ ಎರಡು ಕೈಗಳನ್ನು ನನ್ನ ಮೇಲೆ ಹಾಕಿ, ಕಪೋಲಗಳನ್ನು ನನ್ನ ತಲೆಗೆ ಆನಿಸಿ ಸ್ವಲ್ಪ ಸಮಯ ಹಾಗೇ ಇರಿಸಿದಳು. ಅವಳು ಯಾವುದೋ ಅವ್ಯಕ್ತ ಆನಂದವನ್ನು ಅನುಭವಿಸುತ್ತಿರುವಂತೆ ನನಗೆ ಭಾಸವಾಯಿತು.

ಅನಂತರ ಅವಳು ಮೆಲು ಸ್ವರದಲ್ಲಿಯೇ "ಅಣ್ಣಾ, ವಿಜಯ ಮಾವ ಮದರಾಸಿಗೆ ಹೋಗುವಾಗ ರಾಧಾಕೃಷ್ಣನಿಗೆ ಬೂಟು, ಕೋಟು, ನೆಕಟೈ, ಹ್ಯಾಟು, ತರಬೇಕೆಂದು ಹೇಳಿದ್ದೇನೆ. ಆತ ತರುವೆನೆಂದು ಹೇಳಿರುವನು. ಆತನಿಗೆ ಕೊಡಬೇಕೆಂದು ನಿನ್ನಿಂದ ಹತ್ತು ರೂಪಾಯಿ ಪಡೆದುಕೊಂಡೆ. ಆತ ನಿನ್ನೂ ಬಂದಿಲ್ಲ. ಹತ್ತು ದಿನಗಳಲ್ಲಿಯೇ ಬಂದುಬಿಡುವೆನೆಂದು ಹೇಳಿ ಹೋದವನು ಇನ್ನೂ ಬಂದಿಲ್ಲ. ಅವುಗಳನ್ನು ಅವನಿಗೆ ತೊಡಿಸಿ ಆನಂದ ಪಡಬೇಕೆಂದು ನನ್ನ ಆಶೆ ಇತ್ತು. ಏನು ಮಾಡಲಿ? ಎಂದು ಬರುತ್ತಾನೋ ಏನೋ ಹಾಳು" ಎಂದಳು. ಆಗ ತಿಳಿಯಿತು ಅಂದು ನನ್ನಿಂದ ಅವಳು ಪಡೆದುಕೊಂಡ ಹತ್ತು ರೂಪಾಯಿಗಳು ತನಗಾಗಿ ಅಲ್ಲ ರಾಧಾಕೃಷ್ಣನಿಗೆಂದು. ಏನು ಇವಳ ತ್ಯಾಗವೆಂದು ನಾನು ಆಶ್ಚರ್ಯಹೊಂದಿದೆ. ಅಂದು ಎಲ್ಲ ಹುಡುಗರನ್ನು ಹೆಸರು ಹಿಡಿದು ಕರೆದು, ಅವರನ್ನು ಗುರುತು ಹಿಡಿದು ಮಾತನಾಡಿಸಿದಳು. ಅವಳಿಗೆ ಈ ಲೋಕದ ಪೂರ್ಣ ಎಚ್ಚರ ಇತ್ತು.

ಅವಳು ಈ ರೀತಿ ಎಚ್ಚರದಲ್ಲಿಯೇ ಮಾತನಾಡುತ್ತಲಿದ್ದರೂ, ಡಾಕ್ಟರುಗಳ ಮುಖಗಳ ಮೇಲೆ ಕಳೆಯೇ ಇರಲಿಲ್ಲ. ಅವರು ದಿಗಿಲುಗೊಂಡಂತೆ ಕಾಣುತ್ತಿತ್ತು. ಅವರು ಸುಮ್ಮನೆ ಇದ್ದು, ಯೋಚನೆಯಲ್ಲಿ ಮುಳುಗಿದುದು ನನಗೆ ಬಲು ಬೇಸರವೆನಿಸಿತು. ಅವರ ಇಂಗಿತವು ಏನೆಂಬುದನ್ನು ತಿಳಿಯದೆ ನಾನು ಹತಾಶನಾದೆ. ಮಾರನೆಯ ದಿನ ಅವಳಿಗೆ ಎಚ್ಚರವೇ ಇರಲಿಲ್ಲ.

ನನ್ನ ಮಿತ್ರ ವೀರರಾಘವ ಸ್ವಾಮಿ ಬಂದು ಅಭಿಷೇಕಗಳನ್ನು ಮಾಡಿಸಿದರೆ ಒಳಿತೆಂದು ಹೇಳಿದರು. ಕೂಡಲೇ ಬ್ರಾಹ್ಮಣರನ್ನು ಕರೆದು ಅಭಿಷೇಕಕ್ಕೆ ಬೇಕಾದವುಗಳನ್ನು ಒದಗಿಸಿ ಶಿವಾಲಯಕ್ಕೆ ಕಳಿಸಿದೆವು. ಶ್ರೀ ರಾಮಮೂರ್ತಿಗಳು ಬಂದು ಶ್ರೀ ರಮಣಮಹರ್ಷಿಗಳಿಗೆ ತಂತಿ ಕಳಿಸಬೇಕೆಂದು ಹೇಳಿದರು. ಅದನ್ನು ಮಾಡಿದೆ. ಪ್ರೀಪೇಡ್ ಟೇಲಿಗ್ರಾಂ ಯನ್ನು ಕಳಿಸಿದೆವು. ಶ್ರೀ ಕುಸುಮ ಹರನಾಥರನ್ನು ಪ್ರಾರ್ಥಿಸಿ ಮಂಗಳಾರತಿ ಮಾಡಿದೆವು. ಶ್ರೀ ಸಾಯಿಬಾಬಾನನ್ನೂ ನೆನೆದುಕೊಂಡೆವು. ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿ ಬೃಂದಾವನಕ್ಕೂ ಬೇಡಿಕೊಂಡೆವು. ಮೇಲೆ ತಿರುಪತಿ ತಿಮ್ಮಪ್ಪಗೆ ಹರಕೆಹೊತ್ತೆವು. ಕಂಡ ಕಂಡ ದೇವರಿಗೆ ಬೇಡಿಕೊಂಡುದೂ ಆಯಿತು; ಮುಡುಪುಗಳನ್ನು ಕಟ್ಟಿಟ್ಟೆವು.

ಡಾಕ್ಟರು ದಕ್ಷಿಣಾಮೂರ್ತಿಯವರ ನವರತ್ನ ಚಿಂತಾಮಣಿ ಯೆಂಬ ಹೆಸರಾದ ಸರ್ವಮೂಲಿಕೆಯ ಔಷಧವನ್ನು ತರಿಸಿ ಕೊಟ್ಟೆವು.

ಈ ಆಯುರ್ವೇದ ಔಷಧವನ್ನು ಹಾಕಿದರೆ ವಿರೋಧವೇನೂ ಆಗಲಾರದೇ ಯೆಂದು ಸತ್ಯಂನನ್ನು ವಿಚಾರಿಸಿದೆ. ಅವನು ಮೌನದಲ್ಲಿಯೇ ಔಷಧವನ್ನು ರೋಗಿಗೆ ಕೊಡಬಹುದೆಂದು ಸೂಚಿಸಿದ. ನಾನೇ ಆ ಔಷಧವನ್ನು ನಾಲಿಗೆಗೆ ಕೊಂಚ ಹಚ್ಚಿ ನುಂಗುವಂತೆ ಮಾಡಿದೆ. ಈ ಸಂಜೀವಿಯೆಂತಹ ಔಷಧದಿಂದ ಏನಾದರೂ ಗುಣವಾಗಬಹುದೇ ಯೆಂದು ನಾವೆಲ್ಲಾರೂ ಒಂದೇ ಉಸಿರಿನಿಂದ ರೋಗಿಯನ್ನು ನೋಡುತ್ತ ಕುಳಿತಿದ್ದೆವು. ಅಂದು ನಮಗಾರಿಗೂ ಉತ್ಸಾಹವೆ ಇರಲಿಲ್ಲ. ಆದರೆ ನನ್ನ ಮೈದುನ ಸತ್ಯಂನ ಅತ್ತೆ, ರಾಜಮ್ಮ ಮಾತ್ರ ಮಗಳಿಗೆ ಎಣ್ಣೆ ಸ್ನಾನ ಮಾಡಿಸಿ, ಹೆರಳು ಹಾಕಿ ಹೂಮುಡಿಸುವ ಸಡಗರದಲ್ಲಿ ಇದ್ದಳು. ಬ್ರಾಹ್ಮಣರು ಅಭಿಷೇಕ ಮುಗಿಯಿಸಿ ಪಾದೋದಕವನ್ನೂ, ಅಭಿಷೇಕದ ಜಲವನ್ನೂ ರುಕ್ಮಿಣಿಯ ಮೈಮೇಲೆ ಸಿಡಿಸಿದರು. ಆಶೀರ್ವದಿಸಿದರು. ಶ್ರೀ ರಮಣಮಹರ್ಷಿಯರ ಕಡಿಯಿಂದ ಆಶೀರ್ವಾದ ಪೂರ್ವಕ ಟೆಲಿಗ್ರಾಂ ಏತಕ್ಕೋ ಬರಲಿಲ್ಲ. ಕುಂಭಕೋಣದಲ್ಲಿ ಖ್ಯಾತಿಪಡೆದ ಪೂಜ್ಯರಾದ ಯೋಗಿಯೊಬ್ಬರು ನಮ್ಮೂರಿಗೆ ಬಂದಿದ್ದರು. ಅವರು ಮಹಾತಪಸ್ವಿಗಳಂತೆ; ಸತ್ಪುರುಷರು; ಅವರೇ ಆಶೀರ್ವಾದಗಳನ್ನು

ಕೊಡಲು ತಾವೇ ನಮ್ಮ ಮನೆಯ ವರೆಗೆ ನಡೆದುಕೊಂಡು ಬಂದುದು ನನಗೆ ಆಶ್ಚರ್ಯವೆನಿಸಿದುದಲ್ಲದೆ, ಇವರ ಪಾವನ ಪಾದಗಳ ಧೂಳಿಯಿಂದ ನನ್ನ ರುಕ್ಮಿಣಿಯ ಶನಿಕಾಟ ತೊಲಗಿತೆಂದು ನಾನು ಭಾವಿಸಿದೆ. "ಅವರು ರೋಗಿಯ ಹತ್ತಿರ ಬಂದು ನೋಡಿ, ಅವಳ ತಲೆಯ ಮೇಲೆ ಕೈ ನೀವಿ, "ಏನೂ ಯೋಚಿಸಬೇಡಿ. ನಿಮ್ಮ ಮಗಳು —ಎಂದು ಏನನ್ನೋ ಹೇಳ ಹೋಗಿ " ಮತ್ತೆ ನಾಳೆ ಬರುವೆವು." ಎಂದು ಹೇಳಿ ಹೋದರು.

ನವರತ್ನ ಚಿಂತಾಮಣಿಯನ್ನು ಕೊಟ್ಟ ಒಂದು ಗಂಟೆಯ ಮೇಲೆ ಅವಳಿಗೆ ಪೂರ್ಣ ಎಚ್ಚರ ಬಂತು. ಆಗ ಸಮಯ ಸಂಜೆ ನಾಲ್ಕುವರೆ. ಕಣ್ಣು ಬಿಟ್ಟು ಎಲ್ಲರನ್ನೂ ನೋಡಿದಳು. ಎಲ್ಲರನ್ನೂ ಗುರುತಿಸಿದಳು. "ಮಾವಾ ನನಗೆ ಟೆಂಗಿನಕಾಯಿ ನೀರು ಬೇಕೆಂದು ಬೇಡಿದಳು. ಕೂಡಲೇ ಸತ್ಯಂ ಆಳು ಮನುಷ್ಯನನ್ನು ಪೇಟೆಗೆ ಕಳುಹಿಸಿ ಟೆಂಗಿನ ಕಾಯಿಯನ್ನು ತರಿಸಿದ. ಅವಳು ಆ ನೀರನ್ನು ಸಂತೋಷದಿಂದ ಕುಡಿದಳು. ಅವಳ ಮುಖದಲ್ಲಿ ಶಾಂತಿ ಸಮಾಧಾನ, ತೃಪ್ತಿ ತಾಂಡವವಾಡುತ್ತಿತ್ತು.

ರುಕ್ಮಿಣಿ ಒಂದು ಸಲ ಮುಗುಳು ನಗೆಯಿಂದ ಸತ್ಯಂ ಮಾವನನ್ನು ನೋಡಿ ಕೈ ಮುಗಿದು ನಮಸ್ಕರಿಸಿದಳು. ಎಲ್ಲರನ್ನೂ ತನ್ನ ಹತ್ತಿರ ಕರೆದು ಅವರನ್ನೂ ಮಾತನಾಡಿಸಿದಳು. ತಮ್ಮಂದಿರನ್ನೂ ಸುಶೀಲೆಯನ್ನೂ ಹತ್ತಿರ ಬರ ಹೇಳಿ ಮುದ್ದಾಡಿದಳು. ಅವರತ್ತೆಯನ್ನು ಕರೆದು "ಅತ್ತೆ ನಿನ್ನ ಕೊರಳಲ್ಲಿರುವಂತಹ ದೊಡ್ಡ ಮಂಗಳ ಸೂತ್ರಗಳನ್ನು ನಾನು ಮಾಡಿಸಿಕೊಳ್ಳುವೆನು, ಗುಣವಾದ ಮೇಲೆ " ಎಂದು ಆಕೆಯನ್ನು ಮಾತನಾಡಿಸಿದಳು.

ಆ ಹೊತ್ತಿಗೆ ರಾಜಮ್ಮನೂ ಹತ್ತಿರ ಬಂದಳು. ರುಕ್ಮಿಣಿ ಅವಳನ್ನು ಒಂದು ಸಾರಿ ನೋಡಿದಳು. ಅವಳ ಹಣ್ಣಾದ ಹೃದಯಲ್ಲಿ ವೇದನೆಯಾಯಿತೇನೋ? ಅವಳಿಗೆ ಈ ಪಾಪಿಷ್ಟೆ ಮುದುಕಿಯಿಂದ ಆದ ಅನರ್ಥದ ಮಾತುಗಳೆಲ್ಲ ನೆನಪಿಗೆ ಬಂದಿರಬೇಕು. ಮೃದುವಾದ ಗುಲಾಬಿ ಹೂವಿನ ಎಸಳುಗಳಿಗೆ ಮುಳ್ಳು ಚುಚ್ಚಿಕೊಂಡಂತೆ, ರುಕ್ಮಿಣಿಯ ಮೃದುವಾದ ಹೃದಯಕ್ಕೆ ಇವಳ ನೋಟವೊಂದು ಕಠಾರಿಯ ಇರಿತವಾದಂತೆನಿಸಿರಬೇ

ಕೆಂಪು ನಾನು ನೆನೆದೆ. ಆದರೆ ರುಕ್ಮಿಣಿ ಅವಳನ್ನು ಹತ್ತಿರ ಕರೆದು "ರಾಜಮ್ಮ ತ್ತೆ ನಿಮ್ಮ ಪಾಲಿಗೆ ಬಂದು ಬಿದ್ದಿರುವ ಈ ಎಲ್ಲ ಅನಾಥರನ್ನು ಆದರದಿಂದ ನೋಡುವದಾರಿಯೇನಾದರೂ ಇದೆಯೇ ? ಗಿಡವನ್ನು ಸೇರುವವರಿಗೆ ನೆರಳಿನ ಆಸರವನ್ನಿತ್ತು ಅದು ಸಹಾಯ ಮಾಡುವುದು." ಎಂಬ ಎರಡು ಮಾತು ಹೇಳಿ ಕೈ ಮುಗಿದಳು. ಆ ಹೆಣ್ಣು ಮಗಳು ದಿಗಿಲುಗೊಂಡು ರುಕ್ಮಿಣಿಯನ್ನು ಒಂದೇ ಸವನೆ ದುರದುರ ನೋಡತೊಡಗಿದಳು. ನಾನು ಇನ್ನೇನು ಆ ಡಾಕ್ಟರ್ ದಕ್ಷಿಣಾಮೂರ್ತಿಯ ನವರತ್ನ ಚಿಂತಾಮಣಿ ಉತ್ತಮವಾಗಿ ಗುಣಕಾರಿಯಾಗುವಂತೆ ಕೆಲಸ ಮಾಡುತ್ತಿದೆಯೆಂದು ನಾನು ಹಿಗ್ಗಿದೆ.

...... ಮುಂದೆ ನನ್ನ ಚಿಕ್ಕಮ್ಮ ಈ ಮಾತಿನ ಸರಣಿಯನ್ನು ಎತ್ತಿಕೊಂಡು, ರುಕ್ಮಿಣಿಯ ವಿಷಯವನ್ನು ಮುಂದುವರಿಸಿದಳು..........ನಾನೂ ಹಾಗೆಂದೇ ನೆನೆದೆ. ಆನಂತರ ಅವಳು ಬಹಳ ಹೊತ್ತು ಎಚ್ಚರದಿಂದಲೇ ಇದ್ದಳು. ರಾತ್ರಿ ಹನ್ನೆರಡರ ಸಮಯ. ನಾನು ರುಕ್ಮಿಣಿಯನ್ನು ನೋಡುತ್ತ ಕುಳಿತುಕೊಂಡಿದ್ದೆ. ಅವಳಿಗೆ ಆಗ ತಾನೇ ಸ್ವಲ್ಪ ನಿದ್ರೆ ಹತ್ತಿರಬೇಕು. ನಾನು ಬೀಸಣಿಕೆಯಿಂದ ಗಾಳಿ ಹಾಕುತ್ತ ಇದ್ದೆ.

ಅಷ್ಟರಲ್ಲೇ ರುಕ್ಮಿಣಿ ಒಮ್ಮಿಂದೊಮ್ಮೆ ಏಳಲು ಯತ್ನಿಸಿದಳು. ನಾನು ಅವಳನ್ನು ಹಿಡಿದು ಮತ್ತೆ ಮಲಗಿಸಿದೆ. ಏನಮ್ಮಾ ಎಂದು ಕೇಳಿದೆ. ಏಳಬೇಡವೆಂದು ಹೇಳಿದೆ. ಅವಳು ನನ್ನ ಕಡೆ ನೋಡಿ "ರಾಜಮ್ಮ........" ಎಂದು ಏನನ್ನೋ ಹೇಳ ಹೋಗಿ ಮಾತು ಹೊರಡುವುದು ಅತಿ ಕಷ್ಟವಾದುದರಿಂದ ನಿಸ್ಸಹಾಯದಿಂದ ಸುಮ್ಮನಾದಳು. ಏನು ಎಂದು ಮೂಕ ಸನ್ನೆಯಿಂದಲೇ ಕೇಳಿದೆ. ಅವಳು ಎದುರಿಗಿದ್ದ ಕೋಣೆಯ ಬಾಗಿಲನ್ನು ಮುಚ್ಚಿಡಬೇಕೆಂದು ಸೂಚಿಸಿದಳು. ಆ ಹೊತ್ತಿಗೆ ಎದುರಿಗಿನ ಕೋಣೆಯಲ್ಲಿ ರಾಜಮ್ಮ ಸತ್ಯಂನೊಂದಿಗೆ ಏನೋ ಪಿಸುಗುಟ್ಟುತ್ತಿರುವಂತೆ ಕೇಳಿಸಿತು. ಬಾಗಿಲು ಮುಚ್ಚಿ ಬಂದು ಅವಳ ಹತ್ತಿರ ಕುಳಿತೆ. ಅವಳದನ್ನು ನೋಡಿದಳು. ಆನಂತರ ನಾನು ಅವಳನ್ನು ಮಾತನಾಡಿಸಿದೆ. ಅವಳ ತೆರೆದ ಕಣ್ಣುಗಳಲ್ಲಿ ಜೀವವಿತ್ತು. ಮಾತನಾಡಬೇಕೆಂದು ಯತ್ನಿಸುತ್ತಿದ್ದಾಳೆ. ಆದರೆ ಅವಳ ಬಾಯಿಯಿಂದ

ಮಾತು ಹೊರಡುವುದೇ ಬಹಳ ಕಷ್ಟವಾಗಿತ್ತು. "ಯಾಕಮ್ಮಾ? ಏನು ನಿನ್ನ ಮನಸ್ಸಿನ ಆಶೆ ಹೇಳು. ಏನು ಮಾಡಬೇಕು? ಬಾಗಿಲು ಹಾಕಿ ಬಂದಿರುವೆನು. ಹೇಳಮ್ಮಾ" ಎಂದು ಬೇಡಿಕೊಂಡೆ. ಆದರೆ ಆಪಳು ಮಾತನಾಡಲು ಆಯಾಸ ಹೆಚ್ಚಿದ್ದುದರಿಂದ ಮಾತೇ ಹೊರಡಲಿಲ್ಲ.

ಒಂದು ಗಂಟೆ ಸಮಯಕ್ಕೆ ಅವಳ ನೋಟ ಮಂದವಾಯಿತು; ಪ್ರಜ್ಞೆ ತಪ್ಪಿತು. "ವನಜಾಸುತೆ" ಎಂಬ ಕೀರ್ತನೆಯನ್ನು ಹಾಡಿದಳು. ತನ್ನ ತಾಯಿ ಎದುರು ಇದ್ದಂತೆ ಆಕೆಯೊಂದಿಗೆ ಮಾತನಾಡತೊಡಗಿದಳು. ಸತ್ಯಂನನ್ನು ಕರೆದು ಅವನಿಗೆ ನಡೆದ ವಿಷಯವನ್ನು ಹೇಳಿದೆ. ಅವನು "ಇಷ್ಟೇನು ನವರತ್ನ ಚಿಂತಾಮಣಿಯ ಪ್ರಭಾವ ಆಗು. ಆದರ ಪ್ರಭಾವ ಈಗ ತಗ್ಗಿ ಹೋಗಿದೆ. ಮತ್ತೆ ಹಿಂದಿನಂತೆ ರೋಗದ ಬಲ ಕಾಣಿಸಿಕೊಳ್ಳುತ್ತಿದೆ. ಇದಾದ ನಂತರ ಉಳಿದುದಿನ್ನೇನುಯೆಂದು ಚಿಕ್ಕಮ್ಮ ಮುಖಕ್ಕೆ ಅರಿವೆ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಆಕೆ ಆ ಸ್ಥಿತಿಯಲ್ಲಿರುವಾಗ ನಾನೇ ಉಳಿದ ಸಂಗತಿಯನ್ನು ವಿವರಿಸತೊಡಗಿದೆ.

......ನಾನೂ, ಸತ್ಯಂ, ಮಂಚದ ಎರಡೂ ಪಕ್ಕದಲ್ಲಿ ಕುಳಿತಿದ್ದೆವು. ಚಿಕ್ಕಮ್ಮ (ಬಾಯಮ್ಮ) ಹೊಸ್ತಿಲ ಹತ್ತಿರ ಕುಳಿತಿದ್ದಳು. ಪಂಕಜಮ್ಮ ಕೋಣೆಯ ಹೊರಗೆ ಕುಳಿತಿದ್ದರು. ನಾವಿಬ್ಬರೂ ಮತ್ತಿಷ್ಟು ಹತ್ತಿರ ಸರಿದೆವು. ರಾತ್ರಿ ಎರಡೂ ವರೆಗೆ ಅವಳ ಕಾಲುಗಳು ತಣ್ಣಗಾಗತೊಡಗಿದವು. ಕೈಗಳೂ ಮಂಜಿನಂತಾದವು. ನಮ್ಮ ಅನುಮಾನ ಹೆಚ್ಚಿತು. ನನಗೆ ದಿಗಿಲಿನಿಸಿತು. ದೀನ ವದನದಿಂದ ಆವನ ಕಡೆ ನೋಡಿದೆ. ಆವನು ರುಕ್ಮಿಣೀ ತಾಯಿಯ ಕೈಕಾಲುಗಳನ್ನು ಮತ್ತೊಂದು ಸಲ ಸವರಿ ನೋಡಿ ಶೂನ್ಯದೃಷ್ಟಿಯಿಂದ ನನ್ನ ಕಡೆ ನೋಡಿದ. ಆ ದೃಷ್ಟಿಯಲ್ಲಿ ಮೌನದ ಜತೆಗೆ ಮನಸ್ಸಿನ ಆವೇಗ, ದಿಗಿಲೂ, ಕಂಡುಬಂತು.

ಈ ದೃಶ್ಯವನ್ನು ನೋಡಿ, ನಾನು ಹಾಹಾಂ ಎದೆ ಒಡೆದು ಕುಳಿತುಕೊಳ್ಳಬೇಕಾದುದೇ. ಆದರೆ ನನಗೆ ಎದೆ ಇದ್ದರೆ ತಾನೆ? ನನಗೆಲ್ಲಿದೆ ಎದೆ? "ತಂದೇ ಸತ್ಯಂ" ಎಂದು ನಾನು ಚೀರಿಕೊಂಡೆ. ಅವನು ಆಗಲೇ ತನ್ನ ತಲೆ

ಯನ್ನು ಮಂಚಕ್ಕೆ ಆನಿಸಿಕೊಂಡು ಮುಖವನ್ನು ನೆಲದ ಕಡೆ ಮಾಡಿ ಹುಡುಗನಂತೆ ಅಳುವುದನ್ನು ಕಂಡೆ. "ಏನು ಸತ್ಯಂ? ಆಶೆ ಇದೆಯೇ? ಇನ್ನೆಲ್ಲಿಯ ಆಶೆ ಎನ್ನುವೆಯಾ'' ಎಂದು ಹುಚ್ಚನಂತೆ ಆವೇಗದಿಂದ ಕೇಳಿದೆ. ಅವನು ಮಾತನಾಡಲಿಲ್ಲ. ಆಶೆ ಇಲ್ಲ ಎಂದು ಹೇಳಲು ಅವನಿಗೆ ಧೈರ್ಯವಿರಲಿಲ್ಲ. ಆದರೆ ಇದೆಯೆಂದು ಹೇಳಲೂ ಅವಕಾಶವಿರಲಿಲ್ಲ. ಬೇನೆ ಏರಿಕೆಯ ಸ್ಥಿತಿಯಲ್ಲಿತ್ತು. ಆದರೂ ಅವನು "ನಿಮೋನಿಯಾ ಮಾಯವಾಗುತ್ತಿದೆ. ಇದೊಂದು ವಿಷಮ ಗಳಿಗೆಯನ್ನು ಸುರಕ್ಷಿತ ದಾಟಬೇಕು. ಅಂದರೆ ರುಕ್ಮಿಣಿ ಬದುಕಬಹುದು. ನಮ್ಮ ಅದೃಷ್ಟ ಹೇಗಿದೆಯೋ?" ಎಂದು ಅಳುವ ಸ್ವರದಲ್ಲೇ ಹೇಳಿದ.

ಬದುಕಬಹುದು! ಜೀವಿಸುವಳು! ಈ ಮಾತು ಅವನು ಯಾವ ರೀತಿಯಲ್ಲೇ ಹೇಳಿರಲಿ; ನನಗೇಕೋ ಆ ಮಾತು ಕೊಂಚ ಧೈರ್ಯವನ್ನು ತಂದುಕೊಟ್ಟಿತು. ನನ್ನ ತಾಯಿ ರುಕ್ಮಿಣಿ ಜೀವಿಸುವಳೆಂಬ ಆಶೆ ನನ್ನಲ್ಲಿ ಅಂಕುರಿಸಿತು. ಎಷ್ಟೋ ಮಂದಿ ಇಂತಹ ವಿಷಮಾವಸ್ಥೆಯಿಂದ ಪಾರಾಗಿ ಜೀವಿಸಿದ ಕತೆಗಳನ್ನು ಕೇಳಿರುವೆನು. ಹಾಗೆಯೆ ನನ್ನ ಮನೆಯ ಜ್ಯೋತಿ ನನ್ನ ಮುದ್ದು ಮಗಳು ರುಕ್ಮಿಣಿ, ತ್ಯಾಗಮಯಿ ಉಳಿಯುವಳೆಂದು ನೆನೆದೆ. ಆಶೆ ಇನ್ನೂ ಇತ್ತು. ಹುಮಾಯೂನ್ ಪ್ರಭುವಿಗೆ ಮರಣಾವಸ್ಥೆ ಬಂದಾಗ ಬಾಬರನು ಅನುಸರಿಸಿದ ರೀತಿ,ವರ್ತನೆ ನನ್ನ ನೆನಪಿಗೆ ಬಂತು. ಬಾಬರನು ಆತನ ಮಂಚದ ಸುತ್ತಲೂ ಮೂರು ಸಲ ಪ್ರದಕ್ಷಿಣ ಹಾಕಿ, 'ದೇವ, ಈ ಮಗುವಿನ ಬೇನೆ ನನಗೆ ಬರಲಿ ಅವನ ಪ್ರಾಣಕ್ಕೆ ನನ್ನದನ್ನು ಸ್ವೀಕರಿಸು' ಎಂದು ಬೇಡಿದ ಕಾರಣದಿಂದ ಆತ ಜೀವಿಸಿದ ಕತೆ ನನಗೆ ನೆನಪಾಯಿತು. ಇದು ಇತಿಹಾಸದ ಮಾತು.

ನಾನು ಬಾಬರನಂತೆಯೇ ಮಾಡುವುದೇಯೆಂದು ನಿಶ್ಚಯಿಸಿ ಹುಚ್ಚನಂತೆ ಅವಳು ಮಲಗಿದ ಮಂಚದ ಸುತ್ತ ಮೂರು ಸಲ ತಿರುಗಿದೆ; ಏತಕ್ಕೆ ಹದಿನೈದು ಸಲ ತಿರುಗಿದೆ! "ಓ ಭಗವಂತಾ! ಪ್ರಭೂ! ದೀನರಕ್ಷಕಾ! ನನ್ನ ಮಗಳ ಜೀವ, ಈ ಪವಿತ್ರ ಜೀವ, ನಿನಗೆ ಬೇಕೇ? ಇವಳ ಅಪರಾಧವೇನು? ಇವಳು ಮಾಡಿದ ತ್ಯಾಗಕ್ಕೆ ಇದೇ ತಾನೆ ಪ್ರತಿಫಲ ? ಇದಕ್ಕೆ ಇವಳೇಕೆ ನೋವಿನಿಂದ ನರಳಬೇಕು ? ನನ್ನ ಪ್ರಾಣವನ್ನಾದರೂ ತೆಗೆದುಕೋ." ಎಂದು

ನಿಶ್ಚಲವಾದ ಭಕ್ತಿಯಿಂದ ಪ್ರಾರ್ಥಿಸಿದೆ. ನಿಜವಾಗಿಯೂ ಆಗಿನ ನನ್ನ ಮನೋನಿಶ್ಚಯ, ದೇವರಲ್ಲಿದ್ದ ಭಕ್ತಿ ಅಷ್ಟೊಂದು ನಿಶ್ಚಲವಾಗಿತ್ತು.

ಆದರೆ ಆ ದೇವರದೇವ ನನ್ನ ಬೇಡಿಕೆಯನ್ನು ಆಲಿಸಲಿಲ್ಲ. ಹುಸಿ ಹುಡುಗಿಯ ಜೀವವೇ, ನಸುನಗುತ್ತ ತ್ಯಾಗವಗೈದ, ಈ ಅಮಾಯಕಳನ್ನೇ, ತನ್ನ ತಮ್ಮನ ಸೇವೆಯಲ್ಲಿ ನಿರತಳಾದ ಈ ಪುಣ್ಯವಂತಳನ್ನೇ, ಎಳೆಕರುವನ್ನೇ ದೈವವು ಬಲಾತ್ಕಾರದಿಂದ ಬಯಸಿತ್ತು. ವಿಧಿಗೆ ಎದುರಾಗುವುದು ಯಾರಿಗೆ ಸಾಧ್ಯ?

ಆ ನನ್ನ ದಯಾಮಯ ಭಗವಂತನು ಇವಳಿಗೆ ಸುಮಂಗಲಿಯ ಸಾವನ್ನು ಕೊಡಲು ಬಯಸಿರುವನು. ತ್ಯಾಗಕ್ಕೆ ತಕ್ಕ ಸ್ಥಾನವನ್ನೇ ಕೊಡಲು ನಿಶ್ಚಯಿಸಿರುವನು. ಅವಳನ್ನು ಈ ಭವಬಂಧನದಿಂದ ದೂರಾಗಲು ಸಹಾಯಕನಾಗಿರುವನು. ನಮ್ಮ ಕಣ್ಣಿಗೆ ನಿಷ್ಕರುಣಿಯಾದ ಆ ದೇವದೇವನು ಅವಳಿಗೆ ಒಳ್ಳೆಯದನ್ನೇ ಮಾಡುವಂತೆ ನಿ ಶ್ಚ ಯಿ ಸಿ ರು ವಾ ಗ ನಮ್ಮ ಆಟವಾದರೂ ಸಾಗುವದೆಂತು ?

ರುಕ್ಮಿಣಿಗೆ ರಾತ್ರಿ ನಾಲ್ಕರ ಗಂಟೆಗೆ ಮತ್ತೊಂದು ಸಲ ಪೂರ್ಣ ಎಚ್ಚರ ಬಂತು. ಹೀನಸ್ವರದಲ್ಲಿ ''ಭಾವ'' ಎಂದು ಒರಲಿದಂತೆ ಕೇಳಿಸಿತು. ಅವಳು ಹಾಗೆ ಕೂಗಿ ಸುತ್ತಲೂ ನೋಡಿದಳು. ತನ್ನವರೆಲ್ಲಾರೂ ಇರುವರೇಯೆಂದು ಅವಳ ಕಣ್ಣುಗಳು ಕೋಣೆಯೆಲ್ಲೆಡೆಗೆ ಹುಡುಕಿದವು. ಆ ಹೊತ್ತಿಗೆ ಎಲ್ಲರೂ ಅವಳಿಗೆ ಕಾಣಿಸಿಕೊಂಡರು. ಆದರೆ ಅವರಲ್ಲಿ ಅವಳಿಗೆ ಕಾಣಿಸದಿದ್ದುದು ತನ್ನ ಪತಿದೇವ. ಆತನಿಗೆ ಹಿಂದಿನ ದಿನವೇ ಟೆಲಿಗ್ರಾಂ ಕಳಿಸಲಾಗಿತ್ತು. ಅವನಿದ್ದುದು ಹಳ್ಳಿ; ಆದುದರಿಂದ ಬರಲಾಗಿರಲಿಲ್ಲ.

ಮತ್ತೊಂದು ಅರ್ಧ ಗಂಟೆ ಸರಿಯಿತು. ಅವಳ ಕಣ್ಣುಗಳು ಮುಚ್ಚತೊಡಗಿದವು. ನನಗೇನು ತೋಚಲಿಲ್ಲ. ಅಡುಗೆ ಮನೆಯಲ್ಲಿ ಆ ಪುಣ್ಯಾತ್ಮಳು ಪ್ರತಿ ಶುಕ್ರವಾರ ಪೂಜಿಸುತ್ತಿದ್ದ ದೇವಿಯ ವಿಗ್ರಹದ ಎದುರು ನಿಂತು "ಮಹಾತಾಯಿ, ನನ್ನ ಮಗಳು, ನಿಮ್ಮನ್ನು ನಿತ್ಯವೂ ಪೂಜಿಸಿದ ಫಲವೇನು? ನಿನಗೇನು ಲೋಪವನ್ನು ಮಾಡಿರುವಳು ? ರುಕ್ಮಿಣಿಯನ್ನು ಉಳಿಸಲಾರೆಯ

ತಾಯಿ ? ಅಂಬೆ, ಜಗನ್ಮಾತೆ, ಮಾತಾಯಿ, ರಕ್ಷಿಸು” ಎಂದು ಎಪೆ ಒಡೆ ಯುವಂತೆ ಭೋರೆಂದು ಅತ್ತೆ. ದೇವೀ ವಿಗ್ರಹದಲ್ಲಿ ಸ್ತೈಸ್ಯತೆ ಕಂಡು ಬಂತು. ಆ ಜಗನ್ಮಾತೆಯ ಮಿನಗುವ ಕಣ್ಣುಗಳಲ್ಲಿ ಅಶ್ರುಧಾರೆಗಳನ್ನು ಕಂಡೆ, ಆದರೆ ಅವಳು ಮುಖವನ್ನು ಬೇರೊಂದು ಕಡೆ ತಿರುಗಿಕೊಂಡಂತೆ ಭಾಸವಾಯಿತು.

ಅರಕ್ಷಣದಲ್ಲಿಯೇ ರುಕ್ಮಿಣಿಯು ಮಲಗಿದ ಕೋಣೆಗೆ ಓಡಿ ಬಂದೆ. ಇಷ್ಟರಲ್ಲೇ ಅವಳನ್ನು ಮಂಚದಿಂದ ಚಾಪಿಯ ಮೇಲೆ ಮಲಗಿಸಿದ್ದರು. ರಾಜಮ್ಮನ ಸಹಾಯದಿಂದ ಆ ಕೆಲಸ ನಡೆಯಿತು. ಸೊಸಿಯ ಮೇಲೆ ಈ ಪುಣ್ಯವಂತಳು ಜೀವಂತ ಇರುವಾಗ ವಿಷಕಾರಿ ಕೊನೆಯ ಗಳಿಗೆಯಲ್ಲಿ ಅವಳ ಇಹ ಲೋಕದ ಯಾತ್ರೆ ಮುಗಿಯುವುದಕ್ಕೆ ನೆರವಾದಳು.

ಹೊರಗೆ ಬೆಳಕು ಇಣಿಕಿ ಹಾಕುತ್ತಿದೆ. ಸೂರ್ಯನು ಅಂದು ಅವಸರದಿಂದ ಹೊರಬರುವಂತೆ ಕಾಣುತ್ತದೆ. ರುಕ್ಮಿಣಿಯನ್ನು ಜೀವಂತ ಇರುವಾಗಲೇ ಒಂದು ಸಲ ನೋಡಬೇಕೆಂಬ ಹಂಬಲದಿಂದ ಬಂದಂತೆ ಕಾಣಿಸುತ್ತದೆ. ಬರ ಬೇಕಾದವರೆಲ್ಲರೂ ಬಂದು ಸೇರಿದರು. ರುಕ್ಮಿಣಿ ಮತ್ತೊಂದು ಸಲ ಕಣ್ಣು ತೆರೆದು ನೋಡಿದಳು. ತನ್ನ ಪತಿದೇವನ ಅಂತ್ಯ ದರ್ಶನವಾಗಲಿಲ್ಲವೆಂಬುದು ಅವಳನ್ನು ಕಾಡುತ್ತಿತ್ತು.

ಆದರೂ ಆತ್ಮತ್ಯಾಗವನ್ನು ಮಾಡಿದ ಮಾಹಾಸತಿಯಂತೆ ಅವಳು ಆಗ ಕಂಡಳು. ಆನಂದ ಒಮ್ಮಿಂದೊಮ್ಮೆ ಆವಳನ್ನು ಆವರಿಸಿತು. ಎಲ್ಲರಿಂದಲೂ ಅಪ್ಪಣೆ ಪಡೆಯುವಂತೆ ಆವಳ ಕಣ್ಣುಗಳಲ್ಲಿಯ ದೀನತನ ಹೇಳುತ್ತಿತ್ತು. ಹೀಗೆ ದಿನವೆಲ್ಲವೂ ಸರಿಯಿತು. ಸೂರ್ಯನು ಇವಳ ಸಾವಿನ ನೋವನ್ನು ತಾಳ ಲಾರದೆ ಅಂದು ಬೇಗ ಮುಳುಗಿದಂತೆನಿಸಿತು. ರಾತ್ರಿ ಹತ್ತು ಹೊಡೆಯಿತು. ಅವಳ ಉಚ್ಛ್ವಾಸ, ನಿಶ್ವಾಸಗಳು ದೀರ್ಘವಾಗತೊಡಗಿದವು. ಅವಳು ಬಹು ಕಷ್ಟದಿಂದ ಉಸಿರು ಎಳೆಯುತೊಡಗಿದಳು. ನಾನು ಅವಳನ್ನು ನನ್ನ ತಲೆಯ ಮೇಲೆ ಮಲಗಿಸಿಕೊಂಡೆ. ಅವಳಿಗೆ ತೃಪ್ತಿಯಾದಂತೆನಿಸಲಿಲ್ಲ. ಆದುದರಿಂದ ಸತ್ಯಂ ಆವಳನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಆವಳ ತೆರೆದ ಕಣ್ಣಲ್ಲಿ ಕಣ್ಣಿಟ್ಟು ಸುಮ್ಮನೇ ನೋಡತೊಡಗಿದ. ಅವನ ಕಣ್ಣು ಗಳನ್ನೇ ನೋಡುತ್ತ ಆವಳು ಮೆಲ್ಲನೆ ಕಣ್ಣು ಮುಚ್ಚಿದಳು.

ತಾಯಿ! ರುಕ್ಮಿಣಿ ಇಂದಿಗೆ ನಿನ್ನ ಇಹಲೋಕದ ಯಾತ್ರೆ ಮುಗಿಯಿತೆ? ನನ್ನ ಕಡೆ ನೋಡುವುದಿಲ್ಲವೆ? ಒಂದೇ ಒಂದು ಮಾತನಾಡು! ಈ ಮೌನ ನಿನಗೆ ನ್ಯಾಯವೇ? ನಮ್ಮೆಲ್ಲರನ್ನು ಬಿಟ್ಟು ಎಲ್ಲಿಗೆ ಹೋಗುವೆ? ನಿನಗಾಗಿ ಎರಡು ಜರತಾರಿ ಸೀರೆಗಳನ್ನು ತಂದಿರುವೆನಮ್ಮ! ಅವುಗಳನ್ನು ಯಾರಿಗೆ ಕೊಡಲಿ? ಶಾಸ್ತ್ರಿ, ಸುಶೀಲೆ, ರಾಧಾಕೃಷ್ಣ, ಸಣ್ಣಪಾಪಾ ಇವರೆಲ್ಲರೂ ಅಳುತ್ತಲಿದ್ದಾರೆ. ಇವರೆಲ್ಲರನ್ನೂ ಬಿಟ್ಟು ಹೋಗಲು ನಿನಗೆ ಮನಸ್ಸೇಗೆ ಬಂತು ತಾಯಿ? ಬಾಯಮ್ಮನಿಗೆ ಏನೋ ಹೇಳಬೇಕೆಂದು ನೀನು ನೆನೆದುಕೊಂಡೆ. ಆ ಮಾತು ನಿನ್ನ ಗಂಟಲಲ್ಲೇ ನಿಂತು ಹೋಯಿತು. ಇದರ ಕಾರಣ ವೇನು? ನಿನ್ನ ಮನದ ಮಾತು ನಿನ್ನಲ್ಲಿಯೇ ಉಳಿಯಿತು. ಆ ಮಾತು ಏನೆಂಬುದನ್ನು ಹೇಳಬಾರದೇ ತಾಯಿ. ನಿನ್ನನ್ನು ಯಾರು ಅಡಿಕೊಂಡರು? ಪತ್ರ, ಕಾಗದ, ಕಾಗದ ಎಂದು ಪೇಚಾಡಿದೆ. ನಿನಗೆ ಭಗವಂತನಿಂದ ಕಾಗ ದವು ಬರಬೇಕಿತ್ತು? ಅದು ಬಂದಿತೆ? ಇನ್ನೇನು ಅಣ್ಣಾ ನನ್ನ ದಿನಗಳು ತೀರಿದವು ಎಂದು ಹೇಳಿದೆ. ಆಗ ನೀನು ಹೇಳಿದ ಮಾತಿನ ಅರ್ಥ ನನ್ನ ಮಂಕು ಬುದ್ಧಿಗೆ ಅರಿವಾಗಲಿಲ್ಲ, ತಾಯಿ ರುಕ್ಮಿಣಿ. ನಿನ್ನ ಆ ರೋಗ ಪೀಡಿತ ಹೃದಯದಲ್ಲಿ ಇಂತಹ ಅರ್ಥಗರ್ಭಿತ ಭಾವನೆ ಇರುವುದೆಂದು ನಾನು ಎಂದೂ ಭಾವಿಸಲಿಲ್ಲಮ್ಮ. ಮಲಗು ತಾಯಿ ಎಂದು ನಾವು ಹೇಳಿದರೆ, ಮತ್ತೆ ಎಚ್ಚರವಾಗದ ನಿದ್ರೆಯನ್ನೇ ಆಶ್ರಯಿಸಿದೆಯಾ? ನನ್ನ ದುರ್ಭಾಗ್ಯ ತನಕ್ಕೇನೆನ್ನಬೇಕು? ಆರು ವರುಷಗಳು ನೀನು ಅಭ್ಯಾಸ ಮಾಡಿದ ಸಂಗೀತ ವೆಲ್ಲವೂ ಈಎರಡು ದಿನಗಳಲ್ಲಿಯೇ ಹಾಡಿ ಮುಗಿಸಿ ಮರೆಯಾಗುತ್ತಿರುವೆಯಾ? "ಚಿಂತೆ ಇಲ್ಲ ಈಗ ಜ್ವರ ಕಡಿಮೆಯಾಗಿದೆ" ಎಂದು ಈಗ ನುಡಿದೆ. ಅಂದರೆ ನಿನ್ನ ಪ್ರಾಣವಾಯುವು ಹಾರಿಹೋಗುವಾಗ, ಹೀಗೆ ನಿರಾಯಾಸವಾಗಿ, ಶಾಂತಚಿತ್ತದಲ್ಲಿ ನೀನು ಪ್ರಾಣ ಬಿಡಲು ಯತ್ನಿಸಿದೆಯಾ?

ಅಯ್ಯೋ! ಯಾರಿಗೆ ಹೇಳಿಕೊಳ್ಳಲಿ ನನ್ನ ಈ ದುಃಖವನ್ನು? ಮಗು! ತಾಯಿ! ರುಕ್ಮಿಣಿ! ಎಲ್ಲಿರುವೆ? ಮಾತನಾಡುವುದಿಲ್ಲವೆ? ಏಕೆ, ನನ್ನ ಮೇಲೆ ನಿನಗೆ ,ಕೋಪವೆ? ಅಹುದು, ನಾನು ಪಾಪಿ! ಬೇಡ ಬೇಡವೆಂದರೆ ಮಳೆ ಸುರಿಯುವಾಗ, ಮಿಂಚು ಹೊಳೆಯುವಾಗ,

ಜಗತ್ತೇ ಭೀಕರಗೊಂಡಾಗ, ನಿನ್ನ ತಮ್ಮನನ್ನು ಇಲ್ಲಿಗೆ ಕರೆತಂದೆ. ನಿನ್ನ ಮನಸ್ಸಿಗೆ ಹೆಚ್ಚಿನ ನೋವು ಉಂಟಾಗುವಂತೆ ಮಾಡಿದೆ.

ರುಕ್ಮಿಣೀ ! ಇನ್ನೆಲ್ಲಿ ರುಕ್ಮಿಣಿ ! ನನ್ನ ಪಾಲಿಗೆ ಎಲ್ಲವೂ ಬರಿದೇ! ತೆರವೋ ತೆರವು !

ನಿನ್ನ ತ್ಯಾಗ ! ಎಂತಹ ತ್ಯಾಗ ! ನಿನ್ನ ತಮ್ಮನು ಉಳಿಯುವುದಿಲ್ಲವೆಂದು ನಾವು ನೆನೆದೆವು. ಆದರೆ ಅವನ ಪ್ರಾಣ ಉಳಿಸಲು ನಿನ್ನ ಪ್ರಾಣವನ್ನು ಧಾರೆಯೆರೆದೆ. ಎಲ್ಲಿ ನನಗೆ ಕೊಂಚ ಸಮಾಧಾನ ಹೇಳು. ಏಳು ತಾಯಿ !

ಅಲ್ಲಿ ನೋಡು ವಿಜಯರಾಯರು ಮದರಾಸಿನಿಂದ ಬಂದೇ ಬಿಟ್ಟರು. ಧಾವಿಸಿ ಬಂದು ನಮ್ಮ ಮನೆಯ ಈ ದುಃಖ ಸನ್ನಿವೇಶವನ್ನು ಕಂಡು ಮರುಗಿದರು. ರಾಧಾಕೃಷ್ಣನಿಗೆಂದು ತಂದ ವಸ್ತುವುಗಳನ್ನು ನಮ್ಮ ಮುಂದೆ ಇಟ್ಟು ತಾವೂ ನಮ್ಮ ದುಃಖದಲ್ಲಿ ಭಾಗಿಗಳಾದರು.

ಅವರು ತಂದ ಬೂಟು, ಅಂಗಿ, ಕಾಲು ಚೀಲ, ಸೊಗಸಿನ ರೇಷ್ಮೆಯ ಅಂಗಿ ನಿನ್ನ ತಮ್ಮನಿಗೆ ತೊಡಿಸಿ ನೋಡಿ ಆನಂದಿಸುವ ಸುಖ ನಿನ್ನದಾಗಲಿಲ್ಲ ತಾಯಿ ರುಕ್ಮಿಣಿ. ತನ್ನ ಗಂಡನು ಬರುವನೆಂಬ ಆಶೆ ಅವಳನ್ನು ಕಾಡುತಿತ್ತು. ಅವನಿಗಾಗಿ ಅವಳೆರಡು ಕಣ್ಣುಗಳು ಹುಡುಕಿದವು. ಆದರೆ ಅವನನ್ನು ನೋಡುವ ಭಾಗ್ಯ ಅವಳದಾಗಿರಲಿಲ್ಲ.

ಮಾವನ ತೊಡೆಯ ಮೇಲೆ ತಲೆ ಇಟ್ಟು ಮಲಗಿದ್ದಾಳೆ ರುಕ್ಮಿಣಿ. ರಾಧಾಕೃಷ್ಣ ಅವಳೆದೆಯ ಮೇಲೆ ಮಲಗಿ ಅಳುತ್ತಿದ್ದಾನೆ. "ಅಕ್ಕ, ಅಕ್ಕ, ಮಾತನಾಡು" ಎಂದು ಕರೆಯುತ್ತಿದ್ದಾನೆ. ಅವಳು ತನ್ನ ಸೋದರ ಮಾವನನ್ನೇ ನಂಬಿರುವಳು. ಅವನೇ ದೇವರೆಂದು ಅವಳು ತಿಳಿದಿರುವಳು. ಅವನೇ ರುಕ್ಮಿಣಿಯನ್ನು ಬೆಳೆಸಿದವನು. ದೊಡ್ಡವಳನ್ನಾಗಿ ಮಾಡಿ ಸಾಕಿ ಸಲುಹಿದವನು. ಅವನೇ. ಹುಟ್ಟುವಾಗ ಅವನ ಕೈಯಲ್ಲೇ ಬಿದ್ದ ಅವಳು, ಸಾಯುವಾಗ ಅವನ ತೊಡೆಯನ್ನೇ ಆಶ್ರಯಿಸಿದಳು.

ರಾತ್ರಿ ಹನ್ನೊಂದು. ಮುದುಕಿ ರಾಮಾಯಣ ಸ್ಮರಣ ಮಾಡಿದಳು. ನನ್ನ ತಂಗಿ ಅವಳ ಬಾಯಿಯಲ್ಲಿ ತುಳಸೀ ತೀರ್ಥವನ್ನು ಹಾಕಿದಳು. ಸತ್ಯಂ

ತಿಂಗಳಾಂತ್ಯ ನಡೆಸಿದ ತಪಸ್ಸು ನಿಷ್ಫಲವಾಯಿತು. ರುಕ್ಮಿಣಿ ನಮ್ಮನ್ನು ತೊರೆಯುತ್ತಿರುವಳು. ಅವನ ತೊಡೆಯ ಮೇಲೆ ಮಲಗಿ, ಅವನನ್ನೇ ನೋಡುತ್ತ, ನಿಶ್ಚಿಂತ ದೂರವಾಗುತ್ತಿರುವಳು. ರಮಣ ಮಹರ್ಷಿಗಳ ಆಶೀರ್ವಾದ ಅವಳಿಗೆ ತಲುಪಲೇ ಇಲ್ಲ. ಅವಳ ಇಹಲೋಕಯಾತ್ರೆ ಮುಗಿದ ಮೇಲೆ ಅವರ ಆಶೀರ್ವಾದಗಳು ಬಂದರೇನು ಪ್ರಯೋಜನ? ದೇವರಿಗೆ ಅಭಿಷೇಕದಿಂದ ಅವರ ಕೃಪೆ ನನ್ನ ತಾಯಿಯ ಮೇಲೆ ಆಗಲಿಲ್ಲ. ದಕ್ಷಿಣಾ ಮೂರ್ತಿಗಳ ನವರತ್ನ ಚಿಂತಾಮಣಿಯ ಪ್ರಭಾವ ಇವಳಿಗೆ ಜೀವದಾನ ಮಾಡಲಿಲ್ಲ. ಭಗವಂತನಿಗೆ ನನ್ನ ಪ್ರಾರ್ಥನೆಗಳು ಕೇಳಿಸಲಿಲ್ಲವೆಂದೆನಿಸುತ್ತದೆ.

ನಾನು ಮಹಾ ಪಾಪಿ! ನನ್ನ ಮೇಲೆ ಆ ದೇವನ ಕೃಪೆ ಇಲ್ಲ. ಆಯಿತು! ಹೋಗುತ್ತಿದೆ ಅವಳ ಜೀವ ನಮ್ಮನ್ನು ತೊರೆದು. ಅವಳ ನೋಟ ಮೇಲಿನ ಲೋಕದ ಕಡೆ. ರುಕ್ಮಿಣಿ ಚಿಕ್ಕವಳಿದ್ದಾಗ ಮಿತ್ರ ರಾಮ ರಾಯರು ಅವಳನ್ನು ಚಿರಜೀವಿಯಾಗೆಂದು ಆಶೀರ್ವದಿಸಿದ ಪ್ರಭಾವ ಇಂದು ನಿರುಪಯೋಗವಾಯಿತು. ಅನೇಕ ಹಿರಿಯರು ಅವಳನ್ನು ಆಶೀರ್ವದಿಸಿದರು. ಏನು ಪ್ರಯೋಜನ?

ರುಕ್ಮಿಣಿ, ಮೇಲಿನ ಲೋಕವನ್ನೇ ನೋಡುತ್ತಿರುವಳು. ತಾಯಿ ನಿನ್ನನ್ನು ಉಳಿಸಿಕೊಳ್ಳಲು ನಿನ್ನ ಮದುವೆಯಲ್ಲಿ ಹರಿಸಿದವರ ಆಶೀರ್ವಾದ ಗಳೇನಾದವು? ಕಾಲ ಕಾಲಕ್ಕೆ ಹಿರಿಯರ ಹರಕೆಗಳೆತ್ತ ಹೋದವು? ನಿನ್ನ ಈ ಜೀವನದಲ್ಲಿ ಗಳಿಸಿದ ಪುಣ್ಯವಾದರೂ ನಿನ್ನ ನೆರವಿಗೆ ಬರಲಿಲ್ಲವಲ್ಲ?

ರುಕ್ಮಿಣೀ! ಏಕೆ? ಹೀಗೇಕೆ ಬಿಸಿಯುಸಿರು ಬಿಡುತ್ತಿರುವೆ. ಉಸಿರು ಕಟ್ಟಿರುತ್ತದೆ. ತಡೆತಡೆದೇಕೆ ಉಸಿರು ಬಿಡುತ್ತಿರುವೆ ತಾಯಿ? ನಿನ ಈ ಕಷ್ಟ ನೋಡಲಾರೆ! ಅಯ್ಯೋ ದೈವವೇ. ಇವಳಿಗೆ ಈ ವೇದನೆಯ ಸಾವೆ?

ಅಗೋ! ರುಕ್ಮಿಣಿ ನಮ್ಮ ಕೈಬಿಟ್ಟು ಹೋಗುತ್ತಿರುವಳು. ನನ್ನ ಹೊಟ್ಟೆಯಲ್ಲಿ ಬೆಂಕಿಯನ್ನಿಟ್ಟು ಹೋಗುತ್ತಿರುವಳು. ಹೊರಟಳು! ಇನ್ನೇನು ಹೊರಟೇ ಬಿಟ್ಟಳು! ನನ್ನ ತಾಯಿ, ನನ್ನ ಸೌಭಾಗ್ಯ, ನನ್ನ ಜೀವನದ

ಎರಡು ಪಕ್ಷಗಳು ಇರುವವೆಂತಲೂ ಒಂದು ಪಕ್ಷದಿಂದ ಮತ್ತೊಂದು ಪಕ್ಷಕ್ಕೆ ಬದಲಾಯಿಸುವವನಿಗೆ ಆ ಪದವನ್ನು ಉಪಯೋಗಿಸುವರೆಂದೂ ನಾನು ಹೇಳಿದೆ.

ಅನಂತರ ಮಾರನೆಯ ದಿನ ಆ ಪದದ ಅರ್ಥವೇನೆಂದು ಕಾಂತಂಳನ್ನು ಕೇಳಿದೆ. ನನಗೆ ತಿಳಿಯದೆಂದು ಸ್ಪಷ್ಟ ಹೇಳಿದುದಲ್ಲದೆ, ಕೂತವಳು ಎದ್ದು ನಿಂತು ನಗುವುದಕ್ಕೆ ಆರಂಭಿಸಿದಳು. ಅವಳು ಮುಂದೇನು ಮಾಡುವಳೋ ನೋಡುವ ಎಂದು ಸುಮ್ಮನಿದ್ದೆ. ನನ್ನ ಕೋಟಿನ ಕಾಲರ್‌ನ್ನು ಹಿಡಿದು ಅದರ ಮೇಲೊಂದು ಕೈ ಇರಿಸಿ, ಮತ್ತೊಂದು ಕೈಯನ್ನು ಟೊಂಕದ ಮೇಲಿಟ್ಟು ಕುಲುಕುತ್ತ ನಡೆದು, ಹೀಗೆ ನಡೆಯುವವರಿಗೆ ಟರ್ನ್‌ಕೋಟು ಎಂದು ಹೇಳುವರೆಂದು ಹೇಳುತ್ತ ಸುಮ್ಮನೇ ಬಿದ್ದು ಬಿದ್ದು ನಗತೊಡಗಿದಳು. ನಗುನಗುತ್ತ ಸೋಗು ಮಾಡುತ್ತ ಹೋಗಿಯೇ ಬಿಟ್ಟಳು. ಇನ್ನೇನು ಮಾಡುವುದು ? ಅಂದಿನಿಂದ ಅವಳಿಗೆ ಇಂಗ್ಲೀಷು ಪಾಠವನ್ನು ಹೇಳುವುದನ್ನೇ ನಿಲ್ಲಿಸಿಬಿಟ್ಟೆ. ಕಾಂತಂ ಹೀಗೆ ಹೀಗೆ ನನ್ನನ್ನು ಅಣಕಿಸಬಹುದೇ ?

ಆದುದರಿಂದಲೇ ಅವಳಿಗೇನಾದರೂ ಕೋಪ ಬಂದಿರಬಹುದೇ ? ಯೆಂದು ಯೋಚಿಸುತ್ತಿರುವಾಗ ಕಾಂತಂ ಮೆಲ್ಲನೆ ನನ್ನ ಕೋಣೆಯೊಳಗೆ ಬಂದು ಮೊನ್ನೆ ನೀವು ಕೊಂಡುಕೊಂಡ ಛತ್ರಿಯೆಲ್ಲಿ ಎಂದು ಕೇಳಿದಳು. ಛತ್ರಿ ಕಳೆದುಹೋಗಿದೆಯೆಂದು ಹೇಗೆ ಹೇಳಲಿ? ಹೇಳದೇ ಇರುವುದಾದರೂ ಹೇಗೆ. ಇಂದಲ್ಲ ನಾಳೆಯಾದರೂ ಹೇಳಿಯೇತೀರಬೇಕಲ್ಲವೇ ? ಏನಾದರೂ ಆಗಲೆಂದು "ಹೋಯಿತು" ಎಂದು ಹೇಳಿಬಿಟ್ಟೆ,

"ಹೋಯಿತೇ ! ಸರಿ, ಸರಿ, ನಾನು ಊಹಿಸಿದಂತೇ ಆಯಿತು. ಮೊನ್ನೆ ತಾನೇ ಕೊಂಡಿದ್ದಿರಿ. ನಿಮಗೆ ಛತ್ರಿ ಹಿಡಿದು ಅಭ್ಯಾಸವಿಲ್ಲ. ತೆಗೆದುಕೊಂಡು ಹೋಗಬೇಡಿ‌ಯೆಂದು ನಾನೆಷ್ಟು ಹೇಳಿದರೂ ನನ್ನ ಮಾತಿನಲ್ಲಿ ವಿಶ್ವಾಸವಿಡದೆ ತೆಗೆದುಕೊಂಡುಹೋಗಿ ಅದನ್ನು ಕಳೆದುಬಿಟ್ಟಿರಿ. ಅಯ್ಯೋ, ಎಷ್ಟು ಮುದ್ದಾದ ಛತ್ರಿ ! ತೀರ ಹೊಸದು. ಬೇಡಾಂದೆ, ಕೇಳಿದಿರಾ ನನ್ನ ಮಾತು ? ಎಲ್ಲಿ ಹೋಯಿತು? ಏನಾಯಿತು ? ಹೇಳಬಾರದೇ" ಎಂದು

ಮತ್ತೆ ಅನೇಕ ವಿಧದಲ್ಲಿ ಪ್ರಶ್ನೆ ಮಾಡಿದಳು.

ಮತ್ತೆ "ಅಲ್ಲಾ ಐದುರೂಪಾಯಿಗಳು ಕೊಟ್ಟು ಕೊಂಡ ಛತ್ರಿ! ಒಂದು ಕುಬುಸದ ಖಣ ತೆಗೆದುಕೊಳ್ಳೋಣವೆಂದರೆ ಐದು ರೂಪಾಯಿಗಳೇ ಎಂದು ಯೋಚಿಸಬೇಕಾಗುತ್ತದೆ. ಅದನ್ನಾದರೂ ಕೊಂಡಿದ್ದರೆ ವರುಷೆರಡು ತೊಟ್ಟು ಹರಿಯಬಹುದಾಗಿತ್ತು. ಇಲ್ಲದೇಹೋದರೇ ಅಕ್ಕಿಯಾದರೂ ಕೊಂಡಿದ್ದರೆ ಒಂದು ವಾರದವರೆಗಾದರೂ ಸುಖವಾಗಿ ಊಟಮಾಡಬಹುದಾಗಿತ್ತು. ನಾಲ್ಕಾರುಸೇರು ಬೆಣ್ಣೆಯಾದರೂ ಬರುತ್ತಿತ್ತು. ನೆನೆದರೆ ಎದೆ ಝುಮ್ಮೆನ್ನುತ್ತದೆ! ಹೀಗಾದರೆ ನಾನು ಸಂಸಾರ ಹೇಗೆಸಾಗಿಸಲಿ ? ಒಂದು ಸೀಮೆ ಎಣ್ಣೆ ಡಬ್ಬಾ ಬರುತ್ತಿತ್ತೆ! ಹುಡುಗರು ತಿನ್ನೋದಕ್ಕೇನಾದರೂ ಕೇಳಿದರೆ ಕೊಸರಿಕೊಂಡು ಇಲ್ಲಾ ಅಂದು ಬಿಡ್ತೇವೆ. ಹೀಗೆ ಒಂದೇ ಪೆಟ್ಟಿಗೆ ಐದುರೂಪಾಯಿ ನೀರಲ್ಲಿ ಹಾಕಿದರೆ ಹೇಗೆ ? ಏನಂದರೇನು ಪ್ರಯೋಜನ?........

"ಏನೋ ಹೇಗೋ ಆಯಿತೆಂದು ನಾನು ಸುಮ್ಮನೆ ಕೂಡ್ರುವಹಾಗಿಲ್ಲ. ದೇವರು ಕೊಟ್ಟಿದ್ದು ತಿಂದು ಹಾಯಾಗಿರೋಣವೆಂದರೆ ಎಲ್ಲಿದೆ ಆ ಭಾಗ್ಯ ನನಗೆ ? ಈ ಮನೆಯ ಕೆಲಸ ಮಾಡೀ ಮಾಡೀ ಕತ್ತೆಗಿಂತ ಕೀಳಾಗಿದೆ, ನನ್ನ ಅವಸ್ಥೆ. ಇನ್ನೂ ಗುಡ್ಡದಷ್ಟು ಬಟ್ಟೆಗಳು ಒಗೆಯಬೇಕು. ಮನೆಯಲ್ಲಾ ಸಾರಿಸಬೇಕು. ಸ್ವಲ್ಪಾದರೂ ಕಸವಿರದಂತೆ ಮನೆ ಕಸಗೂಡಿಸಬೇಕು. ಗೋಡೆಗಳೆಲ್ಲಾ ಸ್ವಚ್ಛ ಇರಬೇಕು. ಟೇಬಲದಮೇಲೆ ಪುಸ್ತಕಗಳನ್ನು ಸರಿಯಾಗಿಟ್ಟಿರಬೇಕು. ಮತ್ತೆಲ್ಲಕೆಲಸ ಮಾಡಿಯೇತೀರಬೇಕು. ಇಷ್ಟು ದೊಡ್ಡ ಮನೆ ಏಕೆ ? ಇಷ್ಟೊಂದು ಕೋಣೆಗಳುಳ್ಳ ಮನೆ ಬೇಡೆಂದು ಬಡಕೊಂಡರೂ ನನ್ನ ಮಾತು ಕೇಳಲಿಲ್ಲ.........

"ಇಷ್ಟಾದಮೇಲೆ ಮುಂಜಾನೆ ಒಂಭತ್ತು ಹೊಡೆಯಿತೆಂದರೆ ಅಡುಗೆ ತಯಾರಾಗಿರಬೇಕು. ಏನೋ ಸ್ಕೂಲಿಗೆ ಹೋದಮೇಲಾದರೂ ಸ್ವಲ್ಪ ವಿಶ್ರಾಂತಿ ದೊರೆಯಬಹುದೆಂದು ನೆನೆದರೆ ಒಂದು ಗಂಟೆಗೆ ಟೀ ಬೇರೆ ಅಣಿ ಮಾಡಿಡಬೇಕು. ಇದಾದಕೂಡಲೇ ಮತ್ತಿತರ ಕೆಲಸಗಳು. ನನಗೆಲ್ಲಿದೆ ವಿರಾಮ, ವಿಶ್ರಾಂತಿ?........

"ಅಷ್ಟೇಕೆ, ದೇವರು ಒಂದು ದಿನ ನನ್ನ ಕೆಲಸ ಅವರು, ಅವರ ಕೆಲಸ ನಾನು ಮಾಡುವಂತೆ ಮಾಡಿದರೆ ಆಗ ನನ್ನ ಕಷ್ಟ ಅವರಿಗೆ ತಿಳಿದೀತು" ಎಂದು ಒಂದೇ ಉಸುರಿನಲ್ಲಿ ಲೆಕ್ಚರ್ ಹೊಡೆದಳು.

ಹೀಗೆ ನನ್ನವಳು ದೊಡ್ಡ (Curtain Lecture) ಅಡುಗೆಮನೆಯ ಉಪನ್ಯಾಸವನ್ನು ಕುಟ್ಟಿದಳು. ಅವಳ ಆವೇಗವೆಲ್ಲಾ ಮುಗಿಯಲೆಂದೂ, ಅವಳ ಕೋಪದ ರಭಸ ಸ್ವಲ್ಪ ಕಡಿಮೆಯಾಗಲೆಂದೂ ಸುಮ್ಮನಿದ್ದೆ. ಬಿರುಗಾಳಿ ಶಾಂತವಾದ ನಂತರ "ಕಾಂತಂ ಇದೇನು ನಿನ್ನಮಾತು, ಮಾತಿನ ಅರ್ಥವೇನು? ಮನೆ ಏಕೆ ಹೀಗೆ ಹೊಲಸಾಗಿದೆ? ನೀನೇಕೆ ಹೀಗೆ ಇರುವೆ?" ಎಂದು ಕೇಳಿದೆ.

"ನನಗೆ ಕೆಲಸ ಮಾಡೀ ಮಾಡೀ ಸಾಕಾಗಿಹೋಗಿದೆ. ಬೇಸರಬಂದಿದೆ. ನಿಮ್ಮ ಛತ್ರಿ ಹೋದದ್ದರಿಂದ ನನಗೆ ಕೆಲಸ ಮಾಡುವುದಕ್ಕೆ ಮನಸ್ಸು ಜಾರಬಾಗಿದೆ."

"ಇರಲಿ ಛತ್ರಿ ಯಾವಾಗಲೂ ಕಳೆದುಹೋಗುತ್ತದೇನು?"

"ಅಹುದು ಅಹುದು. ನನ್ನ ಈ ಚಾಕರಿಗೆ ಎಂದು ಸ್ವಸ್ತಿ ಹೇಳಬೇಕೋ ತಿಳಿಯದಂತಿದೆ."

"ಅಲ್ಲ ಕಾಂತಂ, ಮನೆಯ ಕೆಲಸ ನೀನು ಮಾಡೋದಿಲ್ಲಾಂದ್ರೆ?"

"ಅದೇ ನಾನೂ ಯೋಚಿಸುತ್ತಾ ಇದ್ದೇನೆ. ನಾನೇನು ಮಾಡಲಿ? ನನಗೆ ಈ ಜೀವನವೇ ಬೇಸರವೆನಿಸಿದೆ. ದೇವರು ಎಂದು ಕಣ್ಣುಮುಚ್ಚಿಸುವನೋ ತಿಳಿಯದಾಗಿದೆ." ಎಂದು ಶಾಂತಹೊಂದಿ ಕೆಲಸದಮೇಲೆ ಹೋದಳಂತೆ.

ಅವಳಕೋಪ ಇಷ್ಟು ಸುಲಭವಾಗಿ ಶಾಂತವಾದುದು ನನಗೆ ಆಶ್ಚರ್ಯವೆನಿಸಿತು. ಮನೆಯ ಹೆಣ್ಣು ದುಡಿದು ದುಡಿದು ಹಣ್ಣಾಗಿ ಆಡಿದ ಮಾತಿಗೆ ಈಕೋಪ ಏಕೆಂದು ನಾನು ಹೆಚ್ಚು ಗಮನಕೊಡದೆ ಸುಮ್ಮನಾದೆ. ಪ್ರಪಂಚದ ಪ್ರಖ್ಯಾತ ತತ್ವಜ್ಞಾನಿಯಾದ ಸೋಕ್ರೇಟೀಸನಿಗೇ ಈ ಲಂಪಟ, ಸಂಕಟ ತಪ್ಪಿದ್ದಲ್ಲವೆಂದಮೇಲೆ ಈ ಕಾಲದವನಾದ ನನ್ನ ಪಾಡೆಂತು? ಹೀಗೆ ತರ್ಕಿಸಿ

ನಾನು ಸುಮ್ಮನಾದೆ. ಸೋಕ್ರೇಟೀಸನ ಕತೆ ನೆನಪಾಯಿತು. ಆ ಕತೆ ಹೀಗಿದೆ :—

ಒಂದುದಿನ ಸಂಜೆ ಅವನು ಮನೆಗೆ ಬಂದಕೂಡಲೇ ಹೆಂಡತಿ ಸುಮ್ಮನೇ ಬಯ್ಯುವುದಕ್ಕೆ ಮೊದಲು ಮಾಡಿದಳಂತೆ. ಸೋಕ್ರೇಟೀಸನು ಏನನ್ನೂ ಹೇಳದೆ ಕಲ್ಲುಗುಂಡಿನಂತೆ ಕುಳಿತುಬಿಡಲು ಅವಳ ಕೋಪ ಮತ್ತಷ್ಟು ಹೆಚ್ಚಿ ಒಂದು ಬಿಂದಿಗೆಯಷ್ಟು ನೀರು ತಂದು ಅವನಮೇಲೆ ಸುರಿದಳಂತೆ. ಆಗ ಆವನು ಅಂದು ಅವನಿಗಾದ ತಾಪಕ್ಕೆ ಇಷ್ಟೇ ಸ್ವಲ್ಪ ಮಳೆಯನೀರು ಸಾಲ ದೆಂದು ಶಾಂತಚಿತ್ತದಿಂದ ಹೇಳಿದಾಗ ಅವನ ಹೆಂಡತಿಗೆ ಸಂತೋಷವಾಗಿ ಕ್ಷಮೆ ಬೇಡಿದಳಂತೆ.

ನಾನೂ ಸಹಿತ ಅಂದಿನ ಪ್ರಸಂಗ ಅವಳ ವೇದಾಂತದ ವಾಕ್ಯಿನಿಂದ ಕೊನೆಗಂಡುದುದನ್ನು ನೋಡಿ ''ಕಾಂತಂ ! ನಿನಗೊಂದು ತಮಾಷೆಯ ಮಾತು ಹೇಳಬೇಕೆಂದಿದ್ದೇನೆ. ಇದು ನನಗೆ ಸಂಬಂಧಿಸಿದ್ದೇ " ಎಂದು ಹೇಳಿದೆ.

"ಏನದು?—" ಎಂದಳು ಕಾಂತಂ.

"ನಿನ್ನ ಬಗ್ಗೆ ಒಂದು ಕತೆ ಬರೆದಿದ್ದೇನೆ."

"ಏನೆಂದು ಬರೆದಿರುವಿರಿ? ನನ್ನ ಹೆಂಡತಿ ಜಗಳ ಸ್ವಭಾವದವಳು. ಮನೆ ಸ್ವಚ್ಛವಾಗಿರಿಸುವುದಿಲ್ಲ, ಗಂಡನನ್ನು ಗೌರವದಿಂದ ಕಾಣುವದಿಲ್ಲ, ಮಾತಿನ ಮಲ್ಲಿ: ಮನೆಯನ್ನೇ ರಣರಂಗವನ್ನಾಗಿಸುವಳು. ಹಾಗೇ, ಹೀಗೇ ಎಂದು ಬರೆದಿರುವಿರಲ್ಲವೆ? ನನ್ನನ್ನು ನೀವು ಹೆಚ್ಚು ಬೈದಿರಬೇಕು, ಸಮಯ ಸಿಕ್ಕಿತೆಂದು ಸೇಡು ತೀರಿಸಿಕೊಂಡಿರಬೇಕು. ಹೇಳಿ ಏನೇನು ಬರೆದಿರುವಿ ರೆಂಬುವುದನ್ನು"

"ಹೇಳಲೇಬೇಕೇನು........? "

" ಬೇಕೇನು ಗೀಕೇನು ಎಂದರೆ ಯಾರು ಕೇಳುತ್ತಾರೆ? ಹೇಳಲೇ ಬೇಕು. ನೀವು ಏನೇನು ಬರೆದಿರುವಿರೋ ಅವೆಲ್ಲವನ್ನೂ ತಿಳಿಸಬೇಕು. ನನ್ನ ತಪ್ಪುಗಳನ್ನು ಕುರಿತು ಬೈಯುವುದೇ ನಿಮ್ಮ ಕೆಲಸವಲ್ಲದೆ ಮತ್ತೇನು? "

"ಕೊಂಚ ನಿಲ್ಲು ಮಹಾರಾಯಳೇ. ನಾನು ಹೇಳೋದಕ್ಕಿಂತ ಮುಂಚಿತವಾಗಿಯೇ ನೀನೇ ಎಲ್ಲ ಮಾತುಗಳನ್ನಾಡುವೆಯಲ್ಲ? ನಿನ್ನದು ಬಹಳ ಅವಸರದ ಸ್ವಭಾವ. ನನ್ನ ಕತೆಯಲ್ಲಿ ಕಾಂತಂ ಬಹಳ ಒಳ್ಳೆಯವಳು, ಸುಗುಣೆ, ಸಾಧ್ವಿ, ವಿನಯಸಂಪನ್ನಳು ಮುಂತಾಗಿ ಮುಂತಾಗಿ, ಇಂಥ ಹೆಂಡತಿ ಸಿಗುವುದು ಬಹಳ ಅಸಾಧ್ಯವೆಂದು ಬರೆದಿರುವೆನು."

"ಅಷ್ಟಲ್ಲದೆ ಮತ್ತಾವ ರೀತಿಯಲ್ಲಿ ಬರೆಯುವಿರಿ" ಎಂದು ಕಾಂತಂ ಮತ್ತೇನನ್ನೋ ಹೇಳುವುದರಲ್ಲಿದ್ದಳು. ಆ ಮಾತಿಗೆ ಅವಕಾಶ ಕೊಡದೆ ಅವಳ ಗಲ್ಲವನ್ನು ಮೆಲ್ಲಗೆ ತಾಕಿ ಹತ್ತಿರ ಸರಿದು..................ಸಿದೆ.

— ೨ —

"ಹನ್ನೊಂದು ಗಂಟೆ ಹೊಡೆದ ಕೂಡಲೇ ನಾನು ರೇಶಿಮೆ ಮಡಿಯುಟ್ಟು ಊಟಕ್ಕೆ ಸಿದ್ಧನಾದೆ. ಮನೆ ಆಗ ಸ್ವರ್ಗತುಲ್ಯವಾಗಿತ್ತು. ಕಾಂತಂಳ ಮುಖವು ಕಾರ್ತೀಕ ಜ್ಯೋತ್ಸ್ನೆಗಳನ್ನು ಹೊರಸೂಸುತ್ತಿತ್ತು. ದುಃಖಮೇಘಗಳು ಹರುಷವೆಂಬ ಬಿರುಗಾಳಿಯ ಹೊಡೆತಕ್ಕೆ ಸಿಕ್ಕು ಢಾಂಪಾರಿ ಮಾಯವಾಗಿದ್ದವು. ಮನೆಯ ಪಾತ್ರೆಗಳೆಲ್ಲವೂ ಬೆಳ್ಳಿ ಪಾತ್ರೆಗಳಂತೆ ಹೊಳೆಯುತ್ತಿದ್ದವು. ಅರಿವೆಗಳನ್ನು ಹೂವಿನ ಕುಪ್ಪೆಯಂತೆ ಒಗೆದು ಇಟ್ಟಿದ್ದಳು. ಮನೆಯೆಲ್ಲವೂ ಕನ್ನಡಿಯಂತೆ ಮಿನುಗುತ್ತಿತ್ತು. ಇಷ್ಟು ಸ್ವಲ್ಪೇ ಸಮಯದಲ್ಲಿ ಇವಳಲ್ಲಿ ಈ ಬಗೆಯ ಆಶ್ಚರ್ಯಕರವಾದ ಬದಲಾವಣೆಯಾದುದು ನನಗಂತೂ ಆಶ್ಚರ್ಯವೆನಿಸಿತು. ಇದೇನು ಮಾಯಾ ಪ್ರಪಂಚವೇ ಇಲ್ಲವೇ ನಿಜವೇಯೆಂಬ ಅನುಮಾನ ಉಂಟಾಯಿತು. ಇದೆಲ್ಲ ಒಂದೆರಡು ಗಂಟೆಗಳ ಅವಧಿಯಲ್ಲಿ ಆಗಿರಬೇಕೆಂದರೆ? ಅಂದು ಅವಳು ಮಾಡಿದ ಅಡಿಗೆ ಬಹು ದಿವ್ಯವಾಗಿತ್ತು.

ಮುಕುಳಿತ ಕುಸುಮವು ವಾಯುಚುಂಬನದಿಂದ ವಿಕಸಿತವಾಯಿತು. ಮೆಲ್ಲನೆ ಏಳಲೇ ಬೇಡವೇಯೆಂಬ ತರಂಗಗಳನ್ನು ಮಂದಮಾರುತವು ಮುದ್ದಿಟ್ಟುಕೊಂಡರೆ ಸಂತೋಷದಿಂದ ಅವು ನರ್ತಿಸುವುದಿಲ್ಲವೆ? ವಸಂತನಿಂದ ಮುದ್ದಿಸಲ್ಪಟ್ಟ ಪುಷ್ಪಚಯಗಳೆಲ್ಲವೂ ವಿಕಾಸಗೊಳ್ಳುತ್ತವೆ. ಈ ಚಂದ್ರಕಾಂತೆಯನ್ನು ಯಾವುದು ವಿಕಾಸಗೊಳಿಸಿತೆಂಬುದೇ ಸಮಸ್ಯೆಯಾಗಿ ಉಳಿದಿದೆ.

# ನನ್ನ ಕೋಪ

೧ —

ಕಾಂತಂಳೊಂದಿಗೆ ಅಂದು ಬಹಳ ಜಗಳವಾಡಿದೆ. ಭೀಕರ ಜಗಳವೇ ನಡೆಯಿತು. ಹೀಗೆ ಬಾಳುವುದಕ್ಕಿಂತ ಸಾಯುವುದೇ ಮೇಲೆಂದು ನಿರ್ಧರಿಸಿದೆ. ಈ ಲೋಕದಲ್ಲಿ ಬದುಕಿರುವುದು ಲೇಸಲ್ಲವೆಂದು ನನಗೆನಿಸಿತು. ನಾನು ಬಾಳಬೇಕೆಂದೆನಿಸಿದ ಈ ಜಗತ್ತಿನಲ್ಲಿ ಅನೇಕ ಮಂದಿ ಶತ್ರುಗಳಿರುವರೆಂದು ಆಗ ತಿಳಿದು ಬಂತು. ಎಲ್ಲವೂ ನನಗೆ ವಿರುದ್ಧವಾಗಿಯೇ ಕೆಲಸ ಮಾಡುತ್ತಿವೆಯೆಂದೂ, ಈ ಲೋಕದಲ್ಲಿ ಮಿತ್ರರೆಂಬುವರು ಸಹಾ ಶತ್ರುಗಳಾಗಿ ಪರಿಣಮಿಸಿರುವರೆಂದೂ ತಿಳಿಯಿತು. ಮಾನವ ಜೀವನವು ದುಃಖಭೂಯಿಷ್ಟವಾಗಿವೆಯೆಂದು ಕಂಡು ಬಂತು. ಇಲ್ಲಿಗೆ ನನ್ನ ಈ ಲೋಕದ ಅವತಾರವನ್ನು ಮುಗಿಸಿಬಿಡಬೇಕೆಂದೆನಿಸಿತು.

ನಾನು ಈ ಲೋಕದಿಂದ ಮರೆಯಾದರೆ ನನ್ನವರ ಗತಿ ಏನು? ಮೊದಲಿಗೆ ನನ್ನ ಮಿತ್ರವೃಂದಕ್ಕೆ ಬಹು ಸಂಕಟವಾಗಬಹುದು. ಅವರಿಗೆ ನನ್ನ ಸಾವು ಬಹು ನೋವನ್ನುಂಟುಮಾಡುವುದು. ಕೆಲವರು ದುಃಖಿಸುವರು. ಮತ್ತಿತರು ಈ ದುಃಖವನ್ನು ಧೈರ್ಯದಿಂದ ಭರಿಸುವರು. ಅವರೆಲ್ಲರೂ ಸಭೆ ಸೇರಿ "ನಮ್ಮ ಸೋದರ, ನಮ್ಮವನೊಬ್ಬನು ಇಂದು ಇಲ್ಲದಂತಾದನು. ನಮ್ಮನ್ನು ದುಃಖಾಂಬುಧಿಯಲ್ಲಿ ಕೆಡವಿ ಹೋಗಿರುವನು" ಎಂತಾಗಿ ನನ್ನ ಗುಣಗಾನ ಮಾಡಿ, ನನ್ನ ಮನೆಯವರನ್ನು ಸಮಾಧಾನಗೊಳಿಸುವರು. ನನ್ನ ಹೆಸರಿನಲ್ಲಿ ಒಂದು ಗ್ರಂಥಾಲಯವನ್ನು ತೆಗೆದರೂ ತೆಗೆಯಬಹುದು. ಪ್ರತಿ ವರುಷವೂ ನನ್ನ ಹೆಸರಿನಲ್ಲಿ ಒಂದು ಸಾಹಿತ್ಯ ಸ್ಪರ್ಧೆ ಏರ್ಪಡಿಸಿ ನನ್ನ ಹೆಸರು ಸಾಹಿತ್ಯ ಪ್ರಪಂಚದಲ್ಲಿ ಸ್ಥಿರವಾಗಿ ಉಳಿಯುವಂತೆ ಮಾಡಬಹುದು.

ನನ್ನ ಸತೀಮಣಿ ಎಷ್ಟು ದುಃಖಿಸುವಳೋ? ಅವಳ ದುಃಖವು ಅಪಾರವಾಗುವುದು. ಗಭೀರ ಸಮುದ್ರದಲ್ಲಿ ಅವಳನ್ನು ನೂಕಿದಂತೇ! ಅವಳ ದುಃಖ

ವನ್ನು ಯಾರೂ ಯಾವ ವಿಧದಿಂದಲೂ ನಿವಾರಿಸಲಾರರು. ಅವಳ ಅಳು ವನ್ನು ಕಂಡು ಅನೇಕ ಕಠಿಣ ಹೃದಯಿಗಳೂ ಕಣ್ಣೀರಿಡಬಹುದು. ಅವಳ ಆಗಿನ ಸ್ಥಿತಿಯನ್ನು ನೆನೆವರೆ ಬದುಕಿರುವ ನನಗೇ ಈಗ ಎಷ್ಟು ನೋವಾಗು ತ್ತದೆ. ಅಂದಲ್ಲಿ ಅವಳ ಗತಿ ಏನಾಗಬೇಕು? ಈಗೇನು ಮಾತಿಗೆ ಮಾತು ಬಂದು ಒಣ ಜಗಳವಾಡಬಹುದಾಗಲಿ ಅವಳಿಗೆ ನನ್ನ ಮೇಲೆ ಮಮತೆ ಇಲ್ಲವೇ? ಅವಳು ನನ್ನನ್ನು ಪ್ರೀತಿಸುವುದಿಲ್ಲವೆ? ಅವಳದು ಅತಿಕಾರುಣ್ಯಪೂರಿ ತವಾದ ಹೃದಯ. ಬೆಣ್ಣೆಯಂತೆ ಮೃದು. ದುಃಖದಿಂದ ಅವಳು ಕರಗಿ ನೀರಾಗುವಳು. ಅವಳ ಕಣ್ಣೀರು ಪ್ರವಾಹದಂತೆ ಹರಿಯಬಹುದು. ಅವಳು ಅಳುತ್ತಿರುವಾಗ ಕೈ ಕೂಸು-ನನ್ನ ಮಗ-ಅವಳ ಅಳುವಿನ ಕಾರಣ ತಿಳಿಯದೇ ಸುಮ್ಮನೇ ಆಡುತ್ತಿರಬಹುದು. ಇಲ್ಲವೇ ಯಾರಾದರೂ ಕೂಸನ್ನು ಮರೆ ಯಾಗಿ ಕೊಂಚ ಸಮಯ ಕರೆದೊಯ್ಯಬಹುದು.

[ ನನ್ನ ಹೆಸರು ಫೋಟೋದೊಂದಿಗೆ ದಿನಪತ್ರಿಕೆಗಳಲ್ಲಿ ಬರಬಹುದು. ಅನೇಕ ವಾರ, ಮಾಸಪತ್ರಿಕೆಗಳಲ್ಲಿ ನನ್ನ ಬಗ್ಗೆ ಸ್ತುತಿಪರ ಲೇಖನಗಳೂ ಬರಬಹುದು. ಸಂಚಿಕೆಗಳು ನನ್ನ ಫೋಟೋದೊಂದಿಗೆ ಅಂದವಾಗಿ ಕಾಣ ಬಹುದು. ]

ನನ್ನ ಇತರ ಮಿತ್ರರು, ಶಾಲೆಯ ಸಹೋದ್ಯೋಗಿಗಳು, ಊರ ಶ್ರೀಮಂತ ಸ್ನೇಹಿತರು, ನನ್ನ ಪರಿಚಯಸ್ಥರು, ಹೀಗೆ, ಅವರೂ, ಇವರೂ, ಎಲ್ಲರೂ ದುಃಖಿಸುವರು. ಲೋಕಕ್ಕೆ ಅಪಚಾರ ನಡೆದಂತಾಗುವುದು ನನ್ನ ಸಾವಿನ ಪ್ರಸಂಗ. ನನ್ನ ಸ್ವಂತ ಮನೆಯವರಿಗೆ ಸರ್ವನಾಶ ಆಗುವ ವಿಷಯ ದೊಂದಿಗೆ, ಮತ್ತಿತರರಿಗೂ ದುಃಖವಾಗುವುದು ನಿಶ್ಚಯ. ಇಷ್ಟು ಜನರನ್ನು ಶೋಕದಲ್ಲಿ ಮುಳುಗಿಸಿ ನಾನು ಅನುಭವಿಸುವ ಸುಖವಾದರೂ ಏನು? ನನಗೆ ಸುಖವೇ? ಸತ್ತವರ ಬಾಯಲ್ಲಿ ಮಣ್ಣಲ್ಲದೆ ಸುಖವೆಲ್ಲಿ ಬಂತು. ಸುಡುಗಾಡು!

ಅಂದು ಶಾಲೆ ಮುಚ್ಚುವರು. ಸಭೆಗಳಲ್ಲಿ ನನ್ನ ಗುಣಗಾನಮಾಡಿ ಸಂತಾಪಸೂಚಕ ಅನುತಾಪದ ತೀರ್ಮಾನವನ್ನು ಮಾಡಿ ನನ್ನ ಮನೆಯವ ರಿಗೆ ಕಳುಹಬಹುದು. ಶಾಲೆಯ ಒಂದು ಕ್ಲಾಸಿನ ಪುಸ್ತಕ ಭಾಂಡಾರಕ್ಕೆ ನನ್ನ ಹೆಸರೂ ಇಡಬಹುದು.

ಇಡೀ ಲೋಕಕ್ಕೇ ಕಷ್ಟವು ಬಂದಂತಾಗುವುದು. ಹೀಗೆ ಅನೇಕರಿಗೆ ಇಲ್ಲದ ನೋವನ್ನು ಉಂಟುಮಾಡಿ ಸಾಯುವುದರಿಂದೇನು ಪ್ರಯೋಜನ?

ಪ್ರಯೋಜನವೇ? ಇದೆ. ಈ ಲೋಕದ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕೆ ಇದೇ ಸುಸಮಯ. ಈ ಲೋಕದ ಜನರ ಮೇಲೆ ನನಗಿರುವ ಕೋಪಕ್ಕೆ ಉಪಶಮನ ಇದೇ. ಕಾಂತಂಳನ್ನು ಅಳಿಸುವುದಕ್ಕೇ ಇದೇ ಸಾಧನ.

ಬದುಕಿ ಬಾಳುತ್ತಿದ್ದಾಗ, ನನ್ನನ್ನು ಎಲ್ಲರೂ ಬೈಯುವವರೇ. ಒಳಗೂ ಹೊರಗೂ, ಯಾವಾಗಲೂ ನನ್ನನ್ನು ಕಂಡು, ನನ್ನ ಪ್ರಗತಿಯನ್ನು ಕಂಡು ಸಂಕಟಪಡುವವರೇ. ಆದರೆ ಸತ್ತ ಮೇಲೆ ಪಾಪ ಎಂದು ದುಃಖಿಸುವರು. ಹೀಗಾದರೂ ಮಾಡಿದರೆ ನನಗೆ ಕೀರ್ತಿ ಬರುವುದಲ್ಲವೆ? ಈ ಲೋಕದ ಜನರ ಬೈಗಳಿಂದ ನನ್ನ ತಲೆ ಕಾದುಹೋಗಿದೆ. ಸತ್ತರೇನೇ ಸುಖ ನನಗೆ.

"ನಿನಗೆ ಹೆಸರು ಪ್ರತಿಷ್ಠೆಗಳು ಬೇಕಾದರೆ ಬೇಗನೇ ಸಾಯುವುದು ಲೇಸು" ಎಂದು ಓರ್ವ ಆಂಗ್ಲ ತತ್ವವೇತ್ತನು ಹೇಳಿದ್ದಾನಂತೆ. ಅವನ ಈ ಮಾತಿನಲ್ಲಿ ಎಷ್ಟು ಸತ್ಯಾಂಶವಿದೆ? ಪ್ರಪಂಚದ ಹೆಸರಾದ ನಾಟಕಕಾರನಾದ ಷೇಕ್ಸಪಿಯರನು ಸತ್ತ ಮೇಲೆ ಕೀರ್ತಿ ಸಂಪಾದಿಸಿದನೇ ಆಗಲಿ ಬದುಕಿದ್ದಾಗ ಅವನ ನಾಟಕಗಳನ್ನು ಓದಿ ಮೆಚ್ಚಿದ ಜನರು ಬಹಳ ಕಡಮೆ. ಕವಿವರ್ಯ ಕೀಟ್ಸನ ವಿಷಯವಾಗಿಯೂ ಇದೇ ಸ್ಥಿತಿ. ಇವರೆಲ್ಲರೂ ಮರಣಾನಂತರವೇ ಖ್ಯಾತಿ ಗಳಿಸಿದರಂತೆ. ಇತಿಹಾಸದಲ್ಲಿ ಇದೇ ಬಗೆಯ ಅನೇಕ ಉದಾಹರಣೆಗಳು ನಮಗೆ ಸಿಗುತ್ತವೆ. ಸಾಹಿತಿಯ ನಿಜವಾದ ಮಹತ್ವ ಸತ್ತಮೇಲೆಯೇ ತಿಳಿಯುವುದೆಂಬಂತೆ ನಾನೂ ಸತ್ತಮೇಲೆಯೇ ಪ್ರಖ್ಯಾತ ಮನುಷ್ಯನಾಗಬಾರದೇಕೆ? ಹೀಗೆ ನಾನು ಸತ್ತರಲ್ಲದೆ ನನಗೆ ಸುಖವಿಲ್ಲ. ಇದಲ್ಲವೆ ಈ ಲೋಕದ ಜನರ ಮೇಲೆ ಸೇಡನ್ನು ತೀರಿಸಿಕೊಳ್ಳಲೂ ಸಾಧ್ಯವಾಗುವುದು. ಆದುದರಿಂದ ಸಾಯಲೇಬೇಕೆಂಬ ಗಟ್ಟಿ ನಿಶ್ಚಯಕ್ಕೆ ಬಂದೆ.

— ೨ —

ಈ ಬಗೆಯಾಗಿ ಆಲೋಚಿಸಿ ಕಾಂತಂಳನ್ನು ಕರೆದು ಅವಳಿಗೆ ಹೇಳಬೇಕಾದುದನ್ನು ಹೇಳಿ ಸಾಯಲು ಅವಳ ಅಪ್ಪಣೆ ಪಡೆಯೋಣವೆಂದು

ನಿಶ್ಚಯಿಸಿ "ಕಾಂತಂ", "ಕಾಂತಂ" ಎಂದು ಆವೇಗದಿಂದ ಅವಳನ್ನು ಕರೆದೆ.

ಕಾಂತಂ ಮಾತನಾಡಲಿಲ್ಲ. ಇನ್ನೂ ಅವಳ ಕೋಪ ಶಮನವಾದಂತೆ ಕಂಡು ಬರಲಿಲ್ಲ. ನಾನೇ ಮೊದಲು ಮಾತನಾಡಿಸಿದೆನೆಂದು ಅವಳಿಗೆ ಕೊಂಚ ಸೊಕ್ಕು ಬಂದಿರಬೇಕು.

" ಕಾಂತಂ, ಕಾಂತಂ."

" ಏನು ? "

" ಇಲ್ಲಿ ಬಾ."

" ಇದೋ ಬಂದೆ."

ನನಗೆ ಬಹಳ ಕೆಟ್ಟೆನಿಸಿತು. ನಾನು ಸಾಯಲು ಸಿದ್ಧನಾಗಿ ಕೊನೆಯ ಬಾರಿ ಮಾತಾಡಲು ಪ್ರೀತಿಯಿಂದ ಕರೆದರೆ ಇವಳ ಅಹಂಕಾರವೆಷ್ಟು ? ಬರ್ತೀನೆ, ಬರ್ತೀನೆ ಎಂದು ಹೇಳುತ್ತಾಳೆಯೆಂದು ನನಗೆ ಕೋಪ ಬಂತು. ಆದರೆ ಕೊಂಚ ಯೋಚಿಸಿದೆ. ನಾನು ಮನಸ್ಸಿನಲ್ಲಿ ನೆನೆದುದು ಅವಳಿಗೆ ತಿಳಿಯುವುದಾದರೂ ಹೇಗೆಂದು ಕೊಂಚ ಸಮಾಧಾನಹೊಂದಿದೆ. ಬಂದ ಕೂಡಲೇ ಸ್ವಲ್ಪೇ ಮಾತಿನಲ್ಲಿ ನನ್ನ ನಿರ್ಧಾರವನ್ನು ಹೇಳಬೇಕೆಂದು ನಿಶ್ಚಯಿಸಿದೆ. ಗ್ರಾಂಥಿಕ ಭಾಷೆಯಲ್ಲಿ ಹೇಳಬೇಕೆ, ಇಲ್ಲವೆ ಮನೆಮಾತಿನಲ್ಲಿ ಹೇಳಬೇಕೆ ಎಂದು ಯೋಚಿಸಿದೆ. ಛೇ, ಇಲ್ಲಿಯವರೆಗೆ ಬರೀ ಗ್ರಾಮ್ಯದಲ್ಲೇ ಬರೆದು ಹೆಚ್ಚು ಪಾಪ ಗಳಿಸಿದುದರಿಂದ ಸಾಯುವಾಗಲಾದರೂ ಪುಣ್ಯಕಾರಕವಾದ ಗ್ರಾಂಥಿಕ ಭಾಷೆಯಲ್ಲೇ ಹೇಳುವುದೆಂದು ನೆನೆದು "ಕಾಂತಂ ಬಂದೆನ್ನ ಸಂತೈಸು, ನನಗೆ ಅಂತ್ಯಕಾಲ ಬಂದಿರ್ಪುದು " ಎಂದು ಕೂಗಿದೆ.

" ಇರ್ಪುದೆಂದರೇನ್ರೀ? " ಎಂದು ಕಾಂತಂ ನನ್ನ ಹತ್ತಿರ ಬಂದು ಕೇಳಿದಳು.

ಕಾಂತಂ ಹತ್ತಿರ ಬಂದಕೂಡಲೇ ಅವಳನ್ನು ನೋಡಿ ನನಗೆ ಹೇಗೇಗೋ ಆಯಿತು. ನಿಜಾಂಶವನ್ನು ಹೇಳಲು ಬಾಯಿ ಬರಲಿಲ್ಲ. ಈಗ ಬೇಡ. ರಾತ್ರಿ ಊಟ ಮುಗಿದ ನಂತರ ಅವಳೊಂದಿಗೆ ಕೊಂಚ ಸರಸವಾದ ಮಾತುಗಳ

ಸ್ನಾಡಿ, ಆ ಸುಖವನ್ನು ಅನುಭವಿಸಿ, ಅನಂತರ ಮರಣದೀಕ್ಷೆಯನ್ನು ಕೈಕೊಳ್ಳುವುದೆಂದು ನಿಶ್ಚಯಿಸಿ "ಏನಿಲ್ಲ ಕಾಂತಂ ಬರ್ಪುದೇಯೆಂದು ಗ್ರಾಂಥಿಕ ಭಾಷೆಯಲ್ಲಿ ಕೇಳಿದೆ. ನಿನಗೆ ಅದು ಸರಿಯಾಗಿ ಕೇಳಿಸದೆ ಹೀಗೆ ಮಾತನಾಡಿದೆ'' ಎಂದು ಹೇಳಿದೆ.

''ಸರಿಯಾಗಿ ಕೇಳಿಸದೇ ನನಗೇನಾಗಿದೆ ? ಮುದುಕರಾದ್ರೂ ನಿಮಗೆ ಇನ್ನೂ ಹುಚ್ಚು ಕಡಮೆಯಾಗಲಿಲ್ಲ. ಅಡುಗೆ ಆಗಿದೆ ಏಳ್ರಿ, ಯಾಕೆ ತಡ."

ಊಟ ನಿಧಾನವಾಗಿ ಮಾಡಿದೆ. ಅಂದು ಅವಳು ಮಾಡಿದ ಅಡುಗೆ ಬಹಳ ರುಚಿಕರವಾಗಿತ್ತು. ಸುಖವಾದ ಊಟದ ಮುಂದೆ ನನ್ನ ಆ ದೀರ್ಘವಾದ ಸಾವಿನ ಮಾತು ಸ್ವಲ್ಪ ದೂರಾಗತೊಡಗಿತು. ಆದರೂ ನನ್ನ ನಿರ್ಧಾರವನ್ನು ಬದಲಿಸದೆ, "ಕಾಂತಂ ಇಲ್ಲಿ ನೋಡು. ಈ ಎಮ್ಮ ಬಾಳು ನೀರ್ಗುಳ್ಳಿಯಂತೆ. ಎಲ್ಲವಂ ಯೋಚಿಸಿ ನೋಡಲ್ಕೆ ಸಾವೆಮಗೆ ಖಂಡಿತವಲ್ತೆ ? ದಿನಂ ಸರಿಯೆ ಕತ್ತಲೆಯು ಬರ್ಪಂತೆ ಎಮ್ಮ ಬಾಳಿಗೂ ಕತ್ತಲೆಯ ದಿನಗಳ್ ಬರ್ಪುದು ಸಾಜಮಲ್ತೆ ಸುಂದರೀ? ಜೀವನಮುದು ಕ್ಷಣಭಂಗುರಮಲ್ತೆದೇವಿ? " ಎಂದು ನುಡಿಯಲು, ಅವಳು ಗಾಬರಿಗೊಂಡು, ಸ್ವಲ್ಪ ಯೋಚಿಸಿ, " ಇದೇನ್ರಿ ಹೀಗೆ ಮಾತಾಡ್ತೀರಿ? ನಿಮಗೇನಾಯ್ತು? ಆ ಗೋಪಾಲಂರವರ ಸಹವಾಸದಿಂದ ಈಗೀಗ ನಿಮ್ಮ ವರ್ತನೆಯೇ ಬದಲಾಯಿಸಿದಂತೆ ಕಾಣುತ್ತದೆ. ಆತನು 'ಜಗತ್ತು ಮಿಥ್ಯ' "ಜೀವ ಸತ್ಯ" ಅಂತ ಏನೇನೋ ಚೀರಿಕೊಳ್ತಾನೆ. ಅವನ ಗಾಳಿ ನಿಮಗೂ ಬೀಸಿದಂತೆ ಕಾಣುತ್ತದೆ. 'ಜಯಂತಿ' ಪತ್ರಿಕೆಯಿಂದಾಗಲಿ ಇಲ್ಲವೆ "ಭಾರತಿ"ಯಿಂದಾಗಲಿ ಒಂದು ಕತೆಯನ್ನು ಓದುತ್ತೇನೆ. ಆಗ ನಿಮ್ಮ ಮನಸ್ಸಿಗೆ ಸಮಾಧಾನವಾಗಬಹುದು " ಎಂದು ಹೇಳಿದಳು.

ನನ್ನ ಊಟ ಮುಗಿದ ಮೇಲೆ ಕೋಣೆಗೆ ಹೋದೆ. ಸ್ವಲ್ಪ ಸಮಯದ ನಂತರ ತಾಂಬೂಲ ತಟ್ಟೆಯೊಂದಿಗೆ ಕಾಂತಂ ಬಂದಳು. ತಾಂಬೂಲ ಸೇವನೆಯೂ ಆಯಿತು. ಅವಳನ್ನು ನೋಡುತ್ತ " ಸುರಸುಂದರೀ. ಎನ್ನ ಮಾತಂ ಅಚಲಚಿತ್ತಳಾಗಿ ಆಲಿಪುದೆಂದು ನಾಕೇಳ್ವೆಂ" ಎಂದು ಹೇಳಿದೆ.

"ಅಯ್ಯಯ್ಯೋ! ಇದೇನ್ರಿ! ಹೀಗೇಕಾಯ್ತು ನಿಮ್ಮ ಅವಸ್ಥೆ? ಮಗೂ ಇಲ್ಲಿ ಬಾ. ಸಿದ್ದೆ ಬಂತೇನು ? ನಿಮ್ಮ ಭಾವಗೆ ಏನಾಗಿದೆಯೋ ನೋಡು. ಹೇಗೇಗೋ ಮಾತಾಡ್ತಾರೆ. ಸ್ವಲ್ಪ ಪಿತ್ತವಾದಂತೆ ಕಾಣುತ್ತದೆ."

ಸುಂದರೀ. ಈಸು ದಿನಂಗಳ್ ನಾವೀರ್ವರೂ ಸುಖಭೋಗೋಪ ಲಾಲಸಿಗಳಾಗಿ ಕಾಲವಂ ಕಳೆದಪೆವಲ್ತೆ? ಎನಗಿನ್ನುಂ ಈ ಐಹಿಕ ಸುಖಂ ಬೇಡ. ಇದೆಲ್ಲಂ ಮಿಥ್ಯಂ. ನೀಕೇಳ್ ಎನ್ನ ನಿರ್ಣಯಂ, ಎನ್ನವಚನವಂ ನೀಂ ಪಾಲಿಪೆಯಾ ಕುಸುಮಾಕ್ಷೀ. ಈ ಲೋಕದಲ್ಲಿರ್ಪುದಿನ್ನುಂ ಇಷ್ಟಮಿಲ್ಲೆನಗೆ."

"ಇದೇನು ಬಂತಪ್ಪ! ಬೇಗ ಬಾರೋ ನರಸೂ. ಇಲ್ಲಿ ನೋಡು ನಿಮ್ಮ ಭಾವನವರ ಅವಸ್ಥೆ. ಏನೇನೋ ಮಾತಾಡ್ತಾರೆ. ನನಗೊಂದೂ ಅರ್ಥ ವಾಗುತ್ತಿಲ್ಲ. ನಿಮಗೆ ಏನು ಇಷ್ಟವೋ ಅದನ್ನೇ ಹೇಳಿ ಮಾಡಿಸಿಕೊಂಡು ಸುಖವಾಗಿರ್ರಿ. ನಾನು ಮಾಡುವುದಿಲ್ಲವೆಂದು ಹೇಳ್ತೀನೆಯೇ? ನಿಮಗೇನು ಬೇಕೋ ಅದನ್ನು ಖಂಡಿತ ಮಾಡಿ ಹಾಕುತ್ತೇನೆ. ನನ್ನನ್ನು ಇನ್ನು ಹೆಚ್ಚು ಕಾಡಿ ಪೀಡಿಸಿ ಅಳುವಂತೆ ಮಾಡಬೇಡಿ, ನಿಮ್ಮ ಪುಣ್ಯ.''

"ಸುರ ಸುಂದರೀ. ಎನ್ನ ಮಾತಂ ನೀಂ ಲಾಲಿಸ.. ಇಂದಲ್ತೆ ನಮ್ಮೀ ರ್ವರ ಋಣಂ ಕೊನೆಗಾಣ್ಬ ಸಮಯಂ ಬಂದಿರ್ಪುದು. ನಿನ್ನೀ ಪ್ರಿಯಂಗೆ ಕೊನೆಮುತ್ತಂ ಇತ್ತು ಸಾಧ್ವಿಯಾಗು''

"ಇದೇನ್ರೀ? ನನಗೇನೂ ತಿಳಿಯದು."

"ಇದೆಂತು ಮುಗುದೆಯಾದ ನಿನಗೀಗ ಅರ್ಥವಾಗ್ಪುದು? ದೇವೀ. ನಾಳೆನ್ನ ಸ್ವರ್ಗಲೋಕ ಪ್ರಯಾಣಂ ನಿಶ್ಚಯವಾಗಿರ್ಪುದು. ಇದಂ ನೀಂ ತಿಳಿ. ಇಂತೀ ರಾತ್ರಿ ಇಹಲೋಕ ಸೌಖ್ಯವಂ ನಾಂ ಅನುಭವಿಸಿ ನಾಳೆ ಪೋಪೆ. ನೀನೊಪ್ಪಿ ಈ ರಾತ್ರಿ ಎನ್ನಂ ಸಂತೈಸಿ ಸುಖಲೋಲುಪನಾಗಿಸಿ ಕಳುಹುವುದು ನಿನ್ನ ಕರ್ತವ್ಯವಲ್ತೆ ನಾರೀ ಶಿರೋಮಣಿ?"

ಕಾಂತಂ ಮುಂದೇನು ಗತಿಯೆಂದು ನನ್ನ ಹಾಸಿಗೆಯ ಹತ್ತಿರ ಬಂದು ಕುಳಿತಳು. ನಾನು ಸುಮ್ಮನಾದೆ. ಆ ರಾತ್ರಿಯೇ ಹೆಚ್ಚು ಆರ್ಭಟ ಮಾಡು ವುದು ಒಳಿತಲ್ಲವೆಂದು ನಿಶ್ಚಯಿಸಿದೆ. ನನ್ನ ಹತ್ತಿರವೇ ಕುಳಿತ ಅವಳು ಕುಡಿ ಯಲು ಹಾಲು ಕೊಟ್ಟಳು. ನನಗೂ ಅವಳನ್ನು ಕಾಡುವುದು ಒಳಿತಲ್ಲವೆಂದು ನೆನೆದು, ಹಾಲು ಕುಡಿದು ನಿದ್ದೆ ಬರುವವನಂತೆ ನಟಿಸಿದೆ. ಈ ನನ್ನ ವರ್ತ ನೆಯಿಂದ ನನಗೂ ಕೊಂಚ ದಣುವಾಗಿತ್ತು. ಸ್ವಲ್ಪೇ ಸಮಯದಲ್ಲಿಯೇ

ಪಕ್ಕದಲ್ಲಿದ್ದ ಕಾಂತಂಳ ತಿಕ್ಕೆಯಲ್ಲೇ ಹಸುಗೂಸಿನಂತೆ ನಿದ್ರಿಸಿದೆ. ಆ ರಾತ್ರಿ ನಾನೊಂದು ಕನಸನ್ನು ಕಂಡೆ. ಅದರಲ್ಲಿ ನನ್ನ ಸಾವಿನ ಚಿತ್ರವನ್ನು ಕಂಡೆ. ನನ್ನ ಸಾವಿನಿಂದ ನನ್ನ ಮನೆಯವರ ಹೊರತು ಮತ್ತಾರಿಗೂ ಹೆಚ್ಚಿನ ದುಃಖ ವಾಗಲಿಲ್ಲ. ಯಾರೂ ಸಭೆ ಸೇರಿಸಿ ದುಃಖಿಸಲಿಲ್ಲ. ನನ್ನ ಫೋಟೋ ಪೇಪ ರುಗಳಲ್ಲಿ ಬರಲೇ ಇಲ್ಲ. ಶಾಲೆಯಲ್ಲಿ ನನ್ನ ಕ್ಲಾಸಿನ ಹುಡುಗರಾಗಲೀ, ಕೇವಲ ನನ್ನ ಆಪ್ತಮಿತ್ರರಾಗಲಿ ಯಾರೂ ಒಂದು ಚಕಾರ ಶಬ್ದ ಆಡಲಿಲ್ಲ. ನನ್ನ ಬಗ್ಗೆ ಒಳ್ಳೆಯ ಮಾತು ಯಾರೂ ಆಡಲಿಲ್ಲ. ಪುಸ್ತಕ ಭಾಂಡಾರವೂ ಇಲ್ಲ. ಸ್ಪರ್ಧೆಯ ಮಾತಂತೂ ದೂರವೇ ಉಳಿಯಿತು. ಕೆಲಸ್ನೇಹಿತರೂ ಇಸ್ಪೀಟು ಆಟವಾಡುತ್ತ ನನ್ನ ಸಾವಿನ ಸುದ್ದಿ ಕೇಳಿ ಅಯ್ಯೋ ಎಂದು ಹೇಳಿ ಸುಮ್ಮನಾದರು. ಇನ್ನಿತರರು ಹೊರಗೆ ಎದ್ದು ಬಂದರು. ಎಲ್ಲಿಗೆ ಹೋಗು ವರೋಯೆಂದು ನಾನು ಅವರನ್ನೇ ಹಿಂಬಾಲಿಸಿದೆ. ಆ ನಾಲ್ಕು ಮಂದಿ ಹೋಟಲಿಗೆ ಹೋಗಿ ಮಸಾಲ್ ದೋಸೆಯೊಂದಿಗೆ ಕಾಫೀ ಕುಡಿದು ತೇಗಿದರು.

ನನ್ನ ಸಾವಿನಿಂದ ಲೋಕದಲ್ಲಿ ಯಾವ ಬಗೆಯ ಬದಲಾವಣೆಯೂ ಆಗಲೇ ಇಲ್ಲ. ಎಂದಿನಂತೆ ಸೂರ್ಯೋದಯ, ಸೂರ್ಯಾಸ್ತಮಯಗಳಾಗು ತ್ತಿದ್ದವು. ಲೋಕದ ವ್ಯವಹಾರವೆಲ್ಲವೂ ಮೊದಲಿನಂತೆ ನಡೆಯುತ್ತಿತ್ತು.

ನನ್ನ ದೃಷ್ಟಿ ಕಾಂತಂಳ ಕಡೆಗೆ ಹೊರಳಿತು. ಪಾಪ! ಅವಳು ಮೊದ ಮೊದಲು ಹೆಚ್ಚು ದುಃಖಿಸಿ ಹಣ್ಣಾದಳು. ನಿಜವಾದ ವಿಶ್ವಾಸ ಅವಳದು. ಮನದನ್ನೆಯಾಗಿ ಜೀವನ ನೌಕೆಯನ್ನು ನಡೆಸಿದ ಸಾಧ್ವಿ ಅವಳು. ನನ್ನಲ್ಲಿ ಕಂಡ ಒಳ್ಳೇ ಗುಣಗಳನ್ನೆಲ್ಲ ಸೇರಿಸಿ "ಆದರ್ಶಪತಿದೇವ" ಎಂಬ ಒಂದು ಕತೆ ಯನ್ನು ಬರೆದಳು. ಅದನ್ನು ಓದಿದವರೆಲ್ಲರೂ ಹೊಗಳಿ ನಿನ್ನ ಪತಿ ದೇವರಿಗೆ ಸರಿಯಾದ ಕೆಲಸ ಮಾಡಿದೆ. ನೀನೇ 'ಆದರ್ಶಸತಿ' ಯೆಂದು ಲೋಕದ ಜನ ರೆಲ್ಲ ಅವಳ ಕೃತಿಯನ್ನು ಮೆಚ್ಚಿದರು; ಆ ಕಥೆಯ ಆರಂಭ ಹೀಗಿತ್ತು: ಮೇಘ ರಾಜಾ ನೀನು ನಿನ್ನ ಮನೆಗೆ ಹೋಗು, ಅಲ್ಲಿ ನನ್ನ ಪತಿದೇವನು ಪುಸ್ತಕಗ ಳನ್ನು ಓದುತ್ತಲೋ, ಇಲ್ಲವೆ ನನ್ನ ಫೋಟೋವನ್ನು ನೋಡುತ್ತಲೋ ಕುಳಿ

ತಿರಬಹುದು. ಹೀಗೆ ಕತೆ ಬರೆದು ಮುಗಿಸಿದ್ದಳು. ಕೆಲ ಸಮಯದ ನಂತರ ವಿಧವೆಯಾಗಿ ಬಾಳಿ ಹಣ್ಣಾದಳು, ವಿರಹ ದುಃಖದಿಂದ.

ಅಲ್ಲಿಗೆ ನನ್ನ ಕನಸು ಮುಗಿದು ಎಚ್ಚರವಾಯಿತು. ನನ್ನ ಪಕ್ಕದಲ್ಲಿ ಕಾಂತಂ ಸುಖ ನಿದ್ರೆಯಲ್ಲಿದ್ದಳು. ಅವಳನ್ನೆಬ್ಬಿಸಿದೆ. ಇಬ್ಬರೂ ಕೈ ಕಾಲು ತೊಳೆದುಕೊಂಡು ದೇವರಮನೆಗೆ ಹೊಗಿ ದೀಪ ದೊಡ್ಡದು ಮಾಡಿ ಮತ್ತೊಂದು ತುಪ್ಪದ ದೀಪವನ್ನು ಹಚ್ಚಿಟ್ಟು ನಮಸ್ಕಾರ ಮಾಡಿದೆವು. ನನ್ನ ಕೋಣೆಗೆ ಬಂದ ನಂತರ ಕನಸಿನ ವಿವರ ಅವಳಿಗೆ ಹೇಳಿದೆ. ಕಾಂತಂ ನನ್ನನ್ನು ತಬ್ಬಿಕೊಂಡು............ಳು. “ ದಮ್ಮಯ್ಯ ನಾನು ಬದುಕಿದೆ..........”ಎಂದಳು.



# ಕಾಂತಂಳ ಚಟಿ

ನಾನು ಅವಸರದಿಂದ ಓಂಗೋಲಿಗೆ ಕೆಲಸದ ಮೇಲೆ ಹೋಗಬೇಕಾಯಿತು. "ನಾನು ಸಂಜೆ ಆರು ಗಂಟೆಗೆ ಹೋಗಬೇಕು. ಎರಡು ಪಂಚೆ, ಮೇಲೆ ಹೊದಿಯುವ ಶಲ್ಯ, ಎರಡು ಅಂಗಿ, ಒಂದೆರಡು ಟವಲು ಮತ್ತಿತರ ಪ್ರಯಾಣದ ಸಾಮಾನುಗಳನ್ನು ಸರಿಪಡಿಸಿ ಸೂಟ್ ಕೇಸಿನಲ್ಲಿ ಭದ್ರವಾಗಿರಿಸು" ಎಂದು ಕಾಂತಂಳಿಗೆ ಮುಂಜಾನೇ ಹೇಳಿದೆ. ಅವಳು ಸುಮ್ಮನಿದ್ದಳು.

"ನನ್ನ ಮಾತು ಕೇಳಿಸಿತೇ? ಅರ್ಥವಾಯಿತೇ?" ಎಂದು ಕೇಳಿದೆ.

"ಅದರಲ್ಲೇನು ಗೊಂದಲ? ಎಲ್ಲಾ ಅರ್ಥವಾಯಿತು."

"ನಾನು ಹೇಳಿದಂತೆ ಎಲ್ಲವನ್ನೂ...."

"ಆಯಿತು, ಆಯಿತು...." ಎಂದು ಕಾಂತಂ ನನ್ನ ಬಾಯಿ ಮುಚ್ಚಿಸಿದಳು. ಶಾಲೆಗೆ ಹೊತ್ತಾದುದರಿಂದ ಅವಸರದಿಂದ ಹೋಗಿಬಿಟ್ಟೆ.

ಸಂಜೆ ಐದಕ್ಕೆ ಸರಿಯಾಗಿ ಮನೆಗೆ ಬೇಸತ್ತು ಬಂದೆ. ಶಾಲೆಯಲ್ಲಿ ಹುಡುಗರ ಕಾಟ ಅಂದೇಕೋ ಬಹಳವಾಗಿತ್ತು. ಬೇಸರದಿಂದ ಬಂದು ಕೊಂಚ ಸಿಟ್ಟಿನಿಂದಲೇ "ಕಾಂತಂ, ನಾನು ಹೇಳಿದ ಕೆಲಸವು ಮುಗಿಸಿದೆ ತಾನೆ?" ಎಂದು ಕೇಳಿದೆ.

"ಅದರಲ್ಲೇನಿದೆ ಮುಗಿಸುವುದಕ್ಕೆ? ನೀವು ಮುಖ ತೊಳೆದು ಅರಿವೆ ಬದಲಾಯಿಸಿ, ಊಟ ಮುಗಿಸುವುದರೊಳಗೆ............ಏನಂತಹ ಭಾಗ್ಯದ ಕೆಲಸ?"

"ಅಲ್ಲಾಂ ಕಾಂತಂ, ಮುಂಜಾನೆ ಶಾಲೆಗೆ ಹೋಗೋ ಕಾಲಕ್ಕೇ ಹೇಳಿ ಹೋದೆ. ಇಲ್ಲಿಯವರೆಗೂ ನಿನಗೆ ಸಮಯ ಸಿಕ್ಕಲೇ ಇಲ್ಲವೆ?"

"ಏನು ಮಾಡ್ಲಿ ಹೇಳಿ? ನೀವು ಹೊರಗೆ ಹೋದಾಗಿನಿಂದಲೂ ನಾನ್ನು ಒಂದು ನಿಮಿಷವಾದರೂ ಸುಮ್ಮನೆ ಕುಳಿತಿಲ್ಲ. ನೀವು ಹೋದ ಮೇಲೆ ಹುಡುಗರ ಅರಿವೆ ಒಗೆದೆ. ಊಟ ಮುಗಿಯುವ ಹೊತ್ತಿಗೆ ಹುಡುಗರು ಶಾಲೆಯಿಂದ ಬಂದರು. ಅವರಿಗೆ ಊಟ ಹಾಕಿ ಜಡೆ ಹಾಕಿ ಕಳಿಸುವ ಹೊತ್ತಿಗೆ ಪಕ್ಕದ ಮನೆಯ ಲಕ್ಷ್ಮೀದೇವಮ್ಮ ಬಂದರು. ಸ್ವಲ್ಪ, ಆ ಮಾತೂ ಈ ಮಾತೂ ಆಡೋಹೊತ್ತಿಗೆ ನೀವು ಬರುವುದನ್ನು ದೂರದಿಂದಲೇ ಅವರು ನೋಡಿ 'ಬರ್ತೀನಮ್ಮ' ಎಂದು ಈಗ ತಾನೇ ಅವರು ಹಿತ್ತಲ ಬಾಗಿಲಿನಿಂದ ಹೋದರು. ನೀವು ತಲೆಬಾಗಿಲಿನಿಂದ ಬಂದಿರಿ."

"ಅಂತೂ ನನ್ನ ಪ್ರಯಾಣಕ್ಕೆ ಸೂಟ್ ಕೇಸ್ ಸಿದ್ಧವಾಗಿಲ್ಲ ಅಂದ ಹಾಗಾಯಿತು?"

"ಅರಿವೆಗಳೆಲ್ಲಾ ಸಿದ್ಧವಾಗಿಯೇ ಇವೆ. ಇನ್ನೇನು ಅವುಗಳನ್ನು ಪೆಟ್ಟಿಗೆಯಲ್ಲಿ ಮಡಚಿ ಇಡಬೇಕು."

"ಮಡಚಿ ಇಡಬೇಕೆಂದೇ ನಾನು ನಿನಗೆ ಹೇಳಿದ ಮಾತು: ನೀನು ಸುಮ್ಮನೇ ಇದ್ದುಬಿಟ್ಟೆಯಲ್ಲ? ನಿನ್ನ ಹಟಮಾರಿತನ ಇನ್ನೂ ನೀನು ಬಿಡಲಿಲ್ಲ ಕಾಂತಂ."

"ನೀವು ಮುಖತೊಳೆದುಕೊಳ್ಳಿ ಈಗ ನಿಮ್ಮ ಸೂಟು ಕೇಸು ತಯಾರಾಗುವುದು."

"ಅಲ್ಲಾ, ಮುಂಜಾನೆಯಿಂದ ನಾಹೇಳ್ತಾ ಬಂದ ಕೆಲಸ ನೀನು ಮಾಡಿಲ್ಲ. ಇದೇನು ನಿನ್ನ ವಾದಾಂತ್ರೀನಿ? ಎಷ್ಟುಹೊತ್ತಿನ ಕೆಲಸವೆ? ನನ್ನ ಮಾತೂಂದ್ರೆ ನಿನಗೆ........

"ಅಷ್ಟ್ಯಾಕ್ರೀ ಕೋಪ? ನಿಮ್ಮ ಮಾತು ಕೇಳಿಲ್ಲಾಂತ ಹೀಗೆ ರಾಧ್ಯಾಂತ ಮಾಡಬೇಕೇ? ಮತ್ತೇ........"

"ಸಾಕು ನಿನ್ನ ಹರಟೆ" ಎಂದು ನಾನು ಗೊಣಗಿಕೊಳ್ಳುತ್ತ ಶತಪಥ ಹಾಕತೊಡಗಿದೆ. ಕಾಂತಂಳು ಸುಮ್ಮನೆ ಇಲ್ಲಿಯ ವರೆಗೆ ನನ್ನ ಸೂಟ್‌ಕೇಸಿನ ಧೂಳುಸಹಿತ ಕೊಡವದೇ ಸುಮ್ಮನಿದ್ದುದು ತಪ್ಪಲ್ಲವಂತೆ. ತಪ್ಪಾಯಿತೆಂದು

ಒಪ್ಪಿಕೊಳ್ಳುವ ಮನಸ್ಸೂ ಅವಳಿಗಿಲ್ಲ ತಾನೇನೂ ಮಾಡಿಲ್ಲವೆಂದು ಅವಳ ಆ ಮೊಂಡುವಾದ ನನಗೇಕೋ ಸರಿಯೆನಿಸಲಿಲ್ಲ. "ಹೂ. ಆಯಿತು ಕಾಂತಂ. ಈಗಲಾದರೂ ಅದನ್ನು ನೋಡಿ ಇಡು" ಎಂದು ಹೇಳಿ ನಾನು ಊಟಕ್ಕೆ ಕುಳಿತುಕೊಂಡೆ.

ಅಡುಗೆ ಮನೆಯಲ್ಲಿ ನನ್ನ ತಾಯಿ ಬಡಿಸಿದಳು. ಊಟಮಾಡುತ್ತಿರುವಾಗ ಕಾಂತಂ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಸುಳಿದಾಡುತ್ತ ಕಾಲ ಕಳಿದಳೇ ಹೊರತು ನನ್ನ ಸೂಟ್‌ಕೇಸು ಅರಿವೆಗಳನ್ನು ಸಿದ್ಧಗೊಳಿಸುತ್ತಿರುವಂತೆ ನನಗೆನಿಸಲಿಲ್ಲ. ನಾನು ಷರಟು ಹಾಕಿಕೊಂಡು ಮೇಲೆ ಉತ್ತರೀಯವನ್ನು, ಧರಿಸಿ ''ಎಲ್ಲಿ ತಯಾರಾಯಿತೇ?" ಎಂದು ಕೇಳಿದಾಗ ಕಾಂತಂ ದೊಡ್ಡ ಪೆಟ್ಟಿಗೆಯಿಂದ ಪಂಚೆಯನ್ನು ತೆಗೆದು ತೋರಿಸುತ್ತ ''ಇದು ಆಗಬಹುದೇ?'' ಎಂದು ಕೇಳಿದಳು.

ಆಗ ನನಗೇನು ಹೇಳಬೇಕೋ ತೋರಲಿಲ್ಲ. ಆದರೂ ಕೋಪ ನುಂಗಿಕೊಂಡು "ಕಾಂತಂ! ನಿನಗೇನು ಬುದ್ಧೀ ಗಿದ್ಧೀ ಇದೆಯೋ ಇಲ್ಲವೋ? ಗಾಡಿಗೆ ಹೋಗುವ ಹೊತ್ತಾಯಿತೂಂತ ಆಗಿನಿಂದ ಬಡಕೋತೀನಿ. ನೀನು ಶಾಂತಚಿತ್ತದಿಂದ ಅದು ಬೇಕೇ ಇದು ಬೇಕೇಂತ ಕೇಳ್ತಿಯಲ್ಲ. ಈ ನಿರ್ಲಕ್ಷ್ಯ ಸ್ವಭಾವಕ್ಕೆ ನಾನೇನು ಹೇಳಲಿ?" ಎಂದು ನಾನು ಎತ್ತಿದ ಸ್ವರದಲ್ಲಿ ಒದರಿಕೊಳ್ಳುತ್ತಿರುವಾಗ ಅದೇ ಶಾಂತಮನಸ್ಸಿನಿಂದ "ಈ ಪಂಚೇನೂ ಬೇಕೋ ಬೇಡವೋ ಮೊದಲು ಹೇಳೀಂದ್ರೆ" ಎಂದು ಕಾಂತಂ ಕೇಳಿದ ಪ್ರಶ್ನೆ ನನ್ನ ಕೋಪವನ್ನು ಹೆಚ್ಚಿಸಿತು. ನಾನವಳನ್ನು ದುರದುರ ನೋಡಿದರೆ ''ಸಾಕು ಮಾಡ್ರೀಂದ್ರೆ. ನಾನು ಬದುಕಿರೋವರೆಗೇ ಅಲ್ವೇ ಈ ಕೋಪ! ಆ ಮೇಲೆ ಯಾರ ಮೇಲೆ ಕೋಪ ತೋರುವಿರಿ?" ಎಂದು ಹೇಳಿ ಸುಮ್ಮನೇ ಆ ಪಂಚೆಯನ್ನು ಕೈಯಲ್ಲಿ ಹಿಡಿದು ನಿಂತುಬಿಟ್ಟಳು ಕಂಭದಂತೆ.

ನನಗೆ ಈ ಅನ್ಯಾಯವನ್ನು ತಡೆಯುವುದು ಕಷ್ಟವೆನಿಸಿತು. ಸಂಜೆಯವರೆಗೆ ನಾನು ಬೆಳಗಿನಲ್ಲಿ ಹೇಳಿದ ಕೆಲಸ ಮಾಡದಿರುವುದು. ಈಗಲಾದರೂ ತನ್ನದು ತಪ್ಪಾಯಿತೆಂದು ಒಂದು ಪಶ್ಚಾತ್ತಾಪದ ಮಾತು ಹೇಳದೆ ಸುಮ್ಮನಿರು

ವುದಲ್ಲದೆ ತನ್ನ ಗುಂಗಿನಲ್ಲೇ "ಬೇಗ ಹೇಳ್ರೀಂದ್ರೆ ನಿಮ್ಮ ಮುಂದೆ ನಿಂತು ಕುಣಿಯೋಕೆ ನನಗೆ ಈಗ ಹೊತ್ತಿಲ್ಲ. ನನಗೆ ಕೆಲಸ ಬಹಳ ಇವೆ. ಈ ಪಂಚೆ ಬೇಕೋ ಬೇಡವೋ? ಯಾವಾಗಲೂ ನಿಮ್ಮದು ಆಕ್ಷೇಪಣೆಯೇ" ಎಂದು ಹೇಳಿದ ಮಾತುಗಳು ನನ್ನೆದೆಯನ್ನು ಚುಚ್ಚಿ ಗಾಯಗೊಳಿಸಿದವು. ಕೋಪ ಹೆಚ್ಚಿತು.

"ಏನು ಜಗಳವೇ? ನಾನೇ ರಗಳೇ ಮನುಷ್ಯ ಅಲ್ವೆ?"

''ನಾನಾವಮಾತು ಹೇಳಿದೆನೇನು? ನೀವೇ ಎಲ್ಲಾ ಮಾತು ಆಡಿ ಬಿಡ್ತೀರಿ."

''ಆದರೆ ನಿನ್ನ ಆ ಮಾತುಗಳ ಅರ್ಥವೇನು?''

"ಏನೋ ಆಡಿದೇ ಅನ್ನಿ. ಆ ಅರ್ಥಗಿರ್ಥ ನನಗೊಂದೂ ತಿಳಿಯೋ ದಿಲ್ಲ. ನಾನೇನು ಓದಿಕೊಂಡವಳಲ್ಲ.

ಕಾಂತಳ ಈ ನಗೆಚಾಟಿಕೆಯ ವರ್ತನೆ ನನಗೆ ಸರಿ ಬೀಳಲಿಲ್ಲ. ಈ ಬಗೆಯ ಮಾತಿಗೇನನ್ನಬೇಕು ? ಇವಳೇನು ಸಾಮಾನ್ಯ ಮನುಷ್ಯಜಾತಿ ಯಾವಳೇ ಇಲ್ಲವೇ ಗ್ರೀಕ್ ಕತೆಗಳಲ್ಲಿಯ ಮೆಡುಸಾ........ ?"

ಗಾಡಿಗೆ ಟೈಂ ಆಗುತ್ತ ಬಂತು. ಕಾಂತಂಳ ಮಾತಿಗೆ ಕೊನೆಮೊದಲಿರ ಲಿಲ್ಲ. ಬಂದ ಸಿಟ್ಟನ್ನು ನುಂಗಿಕೊಂಡು "ನೋಡು, ನನಗೆ ಹೊತ್ತಾಯಿತು. ನಾಲ್ಕು ಪಂಚೆಗಳನ್ನು, ಎರಡು ಟವಲುಗಳನ್ನು, ಆ ಮೂರು ಅಂಗಿಗಳನ್ನು, ಆ ಸಿಲ್ಕಿನ ಶಲ್ಯ ಎಲ್ಲಾ ಸೂಟ್ ಕೇಸಿನಲ್ಲಿ ಹಾಕಿ ಅಣಿಮಾಡಿ ಇಟ್ಟು ಕೊಡು ಬೇಗ" ಎಂದೆ.

''ಸಿಲ್ಕಿನ ಶಲ್ಯ ಬೇಡಾಂದ್ರೆ.''

''ಯಾಕೆ ಬೇಡ ಕಾಂತಂ? ನಿನ್ನ ಆಜ್ಞೆ ಏನು? ನನಗೆ ಬೇಕು. ಅದನ್ನು ನೀನು ಇಡಲೇಬೇಕು. ಹೂ, ಬೇಗ ಮುಗಿಸು. ಟೈಂ ಆಯಿತು. ನಾನು ಸ್ಟೇಷನ್ನಿಗೆ ಹೋಗಬೇಕು.''

''ನನ್ನ ಮಾತು ಕೇಳ್ರಿ. ಹಟ ಮಾಡಬ್ಯಾಡ್ರೀ. ಆ ಸಿಲ್ಕಿಂದು ಬ್ಯಾಡ. ಮತ್ತೆರಡು ಬೇರೇ ಶಲ್ಯಗಳನ್ನು ಇಡುತ್ತೇನೆ."

"ಆ ಸಿಲ್ಕಿಂದು ಯಾಕೆ ಬೇಡ? ಕಾರಣ ಹೇಳು. ಕಾಂತಂ."

"ಹೂಂ. ನಿಮ್ಮದೇ ಹಟ. ಮುದ್ದಾಗಿ ನನ್ನ ಮಾತು ಕೇಳೋ ಗಂಡಂದಿರಾದ್ರೆ ಸರಿ ನೀವು. ನಾನೆಷ್ಟು ಹೇಳಿಕೊಂಡ್ರೇನು? ಹೆಂಗಸಾಗಿ ಜನ್ಮತಾಳಿದ ಮೇಲೆ ಎಲ್ಲಕ್ಕೂ ಕಾರಣಗಳನ್ನು ಹೇಳಲೇಬೇಕು. ಹೋಗೋ ಹೊತ್ತ್ಯಾಗ ಅಪದ್ಧ ನುಡಿಬಾರದೂಂತ ಅಂದೆ. ಹೂಂ. ನಿಮ್ಮ ಸ್ವಭಾವ ನನಗೆ ಗೊತ್ತಿದೆ. ಎಲ್ಲಾದ್ರೂ........"

ಎಲ್ಲಾದ್ರೂ ಕಳಕೊಂಡು ಬರ್ತೀನಿ. 'ಶುಭಾ ನೋಡಿಯೇ ಮೊದಲಗಿತ್ತೀಂದ್ರೆ ಹಂದರದ ತುಂಬ....' ಅಂತ ಅಪಶಕುನ. ನನ್ನ ಮಾತನ್ನಿಷ್ಟು ಕೇಳು ಕಾಂತಂ. ಯಾಕೆ ಈ ಹಟ? ನಾನೆಷ್ಟು ಸಲ ಪ್ರಯಾಣದ ಮೇಲೆ ಹೋದಾಗ ನನ್ನ ಅರಿವೆಗಳನ್ನು ಕಳಕೊಂಡು ಬಂದಿದೀನಿ?

"ಎಂದು ನೀವು ಮನೀಗೆ ಸುಮ್ಮನೇ ಕಳಕೊಳ್ಳದೇ ಬಂದೀರಿ? ನಾವು ಮನೇ ಹೆಂಗಸ್ರು. ನಮ್ಮ ಮಾತು ಕೇಳ್ರಿ ಇಷ್ಟು."

"ಕಾಂತಂ ನಿನಗಿರೋ ಶ್ರದ್ಧೆ ನನಗಿಲ್ವೆ? ಎಂದೋ ಒಂದು ಸಲ ಅಪ್ಪೀತಪ್ಪಿ ಹರಕು ಟವಲು ತುಂಡು ಕಳೆದುಹೋದುದಕ್ಕೆ ಈ ಮಾತೇ. ಎಷ್ಟು ಆಕ್ಷೇಪಣೆಯೆ? ನನಗೆ ಬೇಕಾಗಿರುವ ಅರಿವೆಗಳನ್ನು ತೆಗೆದುಕೊಂಡು ಹೋಗುವ ಸ್ವಾತಂತ್ರ್ಯ ನನಗಿಲ್ಲವೆ?"

"ಮತ್ತೆ ಆರಂಭವಾಯಿತು. ಹಕ್ಕುಬಾಧ್ಯತೆಗಳ ಮಾತು."

"ನೀನೇ ಇವೆಲ್ಲಕ್ಕೂ ಕಾರಣಳು. ಏನೋ ಮನೆಯ ಯಜಮಾನ್ರು ಹೇಳ್ತಾರಲ್ಲ ಅಂತ ಒಂದು ಸಲವಾದರೂ ನನ್ನ ಮಾತು ನೀನು ನಡೆಸಿಕೊಟ್ಟಿದ್ದುಂಟೆ? ಹೇಳು. ನನ್ನ ಮನಸ್ಸು ನೋಯಿಸುವ ಮಾತು ಆಡಬಾರದೆಂಬ ಬುದ್ಧಿ, ಜ್ಞಾನ, ವಿವೇಕ ಯಾವುದೂ ನಿನಗಿಲ್ಲವಾಯಿತಲ್ಲಾ ಎಂದು...."

"ಸಾಕು ಮಾಡೀಂದ್ರೆ. ಇಷ್ಟೆಲ್ಲ ಆರೋಪಗಳನ್ನು ನನ್ನ ಮೇಲೆ ಹೊರಿಸೋಕೆ ಈಗ ನಾನು ಮಾಡಿದ ತಪ್ಪು, ಆಡಿದ ಕೆಟ್ಟ ಮಾತಾದರೂ ಏನು ಹೇಳಿ?"

"ಮತ್ತೆ ಅದೇ ಮೂರ್ಖತನ. ಏನೂ ಅರಿಯದಂತೆ ಸೋಗು."

"ಮುಖ್ಯ, ಹೆಣ್ಣಾಗಿ ಹುಟ್ಟಬಾರದೊಂದ್ರೆ. ಈಗ ನೀವು ಹೊರೆ ಹೊರೆ ಆಪವಾದ ನನ್ನ ಮೇಲೆ ಹೊರಸಿದ್ರಿ. ನಿಮ್ಮ ಆ ಎಲ್ಲ ಮಾತುಗಳಿಗೆ ಅರ್ಥ ಒಂದೇ. ಆದರೆ ನಾನು ಒಂದು ಮಾತನಾಡಿದರೆ ನೀವು ಅದಕ್ಕೆ ಅನೇಕ ಅಪಾರ್ಥಗಳನ್ನು ಕಲ್ಪಿಸಿ ರೇಗುವಿರಿ."

"ಇರಲಿ ನಿನ್ನ ವ್ಯಾಖ್ಯೆ. ಆ ಸೂಟ್ ಕೇಸು ಇಲ್ಲಿ ಕೊಡು; ನಾನು ಹೊರಡಬೇಕು. ಅದಕ್ಕಾಗಲೇ ಬೀಗ ಹಾಕಿ ಬಿಟ್ಟೇಯಲ್ಲ. ಸೂಟ್‌ಕೇಸ್ ಸಿದ್ಧವಾಗಿದೇಂತ ಹೇಳಬೇಕೋ ಬೋಡವೋ. ಸಿಲ್ಕು ಶಲ್ಯದ ಮಾತೇ ನಾಯಿತು ?"

"ನೋಡ್ರಿ. ನಾಳೆ ಬರುವ ಶುಕ್ರವಾರ ಹೂವಿಳ್ಯಕ್ಕೆ ಸಿಲ್ಕು ಉಟು ಕೋತೀನೀಂತ ನಿಮ್ಮ ಮಗಳು ಬಯಸಿದಳು. ಏನೋ ಸಣ್ಣ ಹುಡುಗಿಯು ನ್ನೇಕೆ ನೋಯಿಸಬೇಕೆಂದು ಇಡಲಿಲ್ಲ. ಇದರ ಮೇಲೆ ಬೇಕಾದರೆ ಇಡು ತ್ತೀನೆ."

"ಹುಚ್ಚಿ, ಈ ಮಾತು ಮೊದಲೇ ಹೇಳಿದ್ದರೆ ಇಷ್ಟು ವಾಗ್ವಾದವೇ ಆಗುತ್ತಿರಲಿಲ್ಲ. ಇರಲಿ ಸಿಲ್ಕು ಶಲ್ಯ ಬೇಡ. ಹೂ ಕೊಡು ಆ ಸೂಟ್ ಕೇಸು. ಹೊರಡಬೇಕು."

"ಆಯಿತು, ತಗೊಳ್ಳಿ. ನೋಡ್ರಿ, ಮೊನ್ನೆ ನನ್ನ ತಮ್ಮ ನಿಮಗೆ ಉಡುಗರೆಯಾಗಿ ಕೊಟ್ಟ ಸೇಲಂ ರೇಷ್ಮೆ ಅಂಚಿನ ಪಂಚೆಗಳನ್ನಿಟ್ಟಿದ್ದೇನೆ. ಕಳಕೊಂಡು ಬರಬೇಡಿರಿ. ನಿಮಗೆ ಮರವು ಹೆಚ್ಚು" ಎಂದು ಮತ್ತೆ ಎಚ್ಚರಿ ಸಿದಳು.

"ಕಾಂತಂ ನನ್ನನ್ನೇನು ಮನುಷ್ಯಾಂತ ತಿಳಿದೀಯೋ ಇಲ್ಲವೋ? ನನ್ನೊಬ್ಬನಲ್ಲೇ ಈ ಎಲ್ಲಾ ದೋಷಗಳಿವೇಂತ ನಿನ್ನ ಭಾವನೆ ಏನು? ನಿನ್ನೊಂದಿಗೆ ಅನಿಸಿಕೊಂಡೂ........"

"ಇರಲಿ, ಇರಲಿ. ಗಾಡಿಗೆ ಹೊತ್ತಾಯ್ತು; ಹೊರಡಿ ಇನ್ನು."

"ರುಕ್ಮಿಣೀ, ಅಲ್ಲಿರೋ ಜಟಕಾನ ಕರಿಯಮ್ಮ."

"ಗಾಡಿಯಾಕೆ ಬೇಕು. ಇದೊಂದನ್ನೇ ಹಿಡಿದುಕೊಂಡು ಸರಸರ ನಡೆದು ಬಿಟ್ಟರಾಯ್ತು."

"ಅಲ್ಲಾ ಒಂದೂವರೆ ಮೈಲು ದೂರ ಇರೋ ಸ್ಟೇಷನ್ನಿಗೆ ನಡೆದು ಹೋಗೋದೆ?"

"ನೀವು ಗಂಡುಸರಲ್ವೆ? ನಡೆಯಬಲ್ಲಿರಿ."

"ಸುಮ್ಮನಿರೆ. ನನ್ನ ಕಾಡಬ್ಯಾಡ. ಬರೇ ಮಾತು. ರುಕ್ಮಿಣೀ, ಕೊಂಚ ನೋಡಮ್ಮಾ."

"ಏ, ಏ, ಜಟಕಾ ನಿಲ್ಲು. ರುಕ್ಮಿಣೀ ಆ ಜಟಕಾನ ನಿಲ್ಲಿಸಮ್ಮ."

"ಅಮ್ಮಾ, ಅಪ್ಪ ಜಟಕಾ ಹತ್ತಿದ್ದಾರೆ."

"ಸ್ವಲ್ಪ ನಿಲ್ಲೆಂದು ಹೇಳು" ಎಂದು ಕಾಂತಂ ಒಳಗಿನಿಂದಲೇ ಕೂಗಿ ಕೊಂಡರು.

"ಅಪ್ಪಾ, ಸ್ವಲ್ಪ ತಡೀಬೇಕಂತೆ; ಅಮ್ಮ ಹೇಳ್ತಾಳೆ."

ಕಾಂತಂ ಅಡುಗೆ ಮನೆಯಿಂದ ಓಡಿ ಬಂದು "ಇಲ್ಲಿ ಸ್ವಲ್ಪ ಒಳಗೆ ಬರ್‍ರೀಂದ್ರೆ" ಎಂದು ನನ್ನನ್ನು ಕರೆದಳು. ನಿರ್ವಾಹವಿಲ್ಲದೆ ಜಟಕ ಇಳಿದು ಮನೆಯೊಳಗೆ ಬಂದೆ.

"ಇದು ಮೊನ್ನೆ ಹಾಕಿದ ಉಪ್ಪಿನಕಾಯಿ. ಹಾದೀಲಿ ಗುಂಟೂರು ಬರ್‍ತದೆ. ನಮ್ಮ ಅಕ್ಕಗೆ ಬಯಕೆ ಅಂತೆ. ಇದನ್ನಿಷ್ಟು ಕೊಟ್ಟು ನೀವು ಮುಂದೆ ಹೋಗ್ರೀಂದ್ರೆ."

"ಒಳ್ಳೇ ಮಾತು ನಿಂದು. ನೀನು ಅದನ್ನು ಸರಿಯಾಗಿ ಪ್ಯಾಕೂ ಮಾಡಿಲ್ಲ. ನಾನು ಹ್ಯಾಗೆ ತೆಗೆದುಕೊಂಡು ಹೋಗಲಿ ಅದನ್ನು?"

"ಯಾಕೆ ರೈಲಿನಲ್ಲಿಟ್ಟುಕೊಂಡರಾಯಿತು."

"ಸ್ಟೇಷನ್ನಿಂದ ಅವರ ಮನೆಗೆ ಯಾರು ಹೋಗಬೇಕು?"

"ಅವರ ಮನಿ ಸ್ಟೇಷನ್ ಎದುರಿಗೇನೆ ಇದೆ. ನಮ್ಮ ಮನೀಯವ ರೆಂದ್ರೆ ನಿಮಗೆಲ್ಲಿದೆ ಮಮತೆ, ಪ್ರೀತಿ? ನಾನೊಬ್ಬಳೇ ಸಾಯ್ತೀನಿ ನಮ್ಮವ ರೂಂತ. ಇರಲಿ ಬಿಡ್ರಿ."

"ಕಾಂತಂ, ಅಲ್ಲಾ ಈ ಸ್ವಲ್ಪ ವಿಷಯಕ್ಕೇ ನೀನು ಮನಸ್ಸು ನೋಯಿಸಿ ಕೊಳ್ಳಬೇಕೇ. ಬಂದರುನಿಂದ ಒಂಗೋಲಿಗೆ ಹೋಗೋ ದಾರೀಲಿ ಗುಂಟೂರು ಬರೋದಿಲ್ಲ. ನಾನೇನು ಮಾಡ್ಲಿ ಹೇಳು? ನಿನಗೆ ಅಷ್ಟು ಮಾತ್ರ ತಿಳಿದಿಲ್ವೆ."

"ಯಾಕೆ ಬರೋದಿಲ್ಲ. ಮನಸ್ಸಿದ್ದರೆ ಎಲ್ಲಾ ಬಂದೇ ಬರ್ತ್ತದೆ. ನಾನೇ ನಿರ್ಭಾಗ್ಯಳು."

ನಾನು ಹೋಗೋ ದಾರೀಲಿ ಗುಂಟೂರು ಬರುವುದಿಲ್ಲೆಂಬ ಅವಳ ಅಜ್ಞಾನದ ಮೂರ್ಖವಾದಕ್ಕೆ ಒಳಗೇ ನಗುತ್ತ ನಾನು ಜಟಕಾ ಏರಿ ನನ್ನ ಪ್ರಯಾಣ ಬೆಳೆಸಿದೆ.





# ಕಾಂತಂಳ ಮನೋನಿಶ್ಚಯ

ಕಾಂತಂ ನಾನೂ ತಿಂಗಳ ಕೊನೆಯ ದಿನ ಹರಟೆಹೊಡೆಯುವಾಗ ಆ ತಿಂಗಳ ವೆಚ್ಚ ಮಿತಿಮೀರಿತೆಂದು ತಿಳಿದುಬಂತು. ಇದರ ಕಾರಣವೇನೆಂದು ತಿಳಿಯಲು ನಾವು ಹವಣಿಸಿದೆವು. "ಇಲ್ಲಿ ನೋಡ್ರಿ, ನೀವು ಸಿಕ್ಕಸಿಕ್ಕ ಮಿತ್ರರನ್ನು ಮನೆಗೆ ಊಟಕ್ಕೆ ಕರೆದುಕೊಂಡು ಬರಬೇಡಿ. ಒಂದು ಒಳ್ಳೆ ಮಾತು ಆಡಿದರೆ ಮುಗಿಯಿತು, ಅವರು ನಿಮ್ಮ ಪರಮಮಿತ್ರರಾಗಿಬಿಡುವರು. ನಿಮ್ಮ ಕತೆಗಳು ಚನ್ನಾಗಿವೆಯೆಂದು ಒಂದು ಮಾತು ಹೇಳಿದರೆ ತೀರಿತು. ಅವರಿಗೆ ಮನೆಯಲ್ಲಿ ಸುಖಭೋಜನ, ಹೋಟಲಿನಲ್ಲಿ ಫಲಹಾರ, ಮತ್ತೇನಿಲ್ಲ, ಮತ್ತೇನಿಲ್ಲ. ಹೀಗಾದರೆ ನಮ್ಮ ಮನೆತನ ಹೇಗೆ ಮುಂದರಿಯಬೇಕು ? ಇವೆಲ್ಲಾ ಆಗದ ಮಾತು. ಇನ್ನು ಮುಂದೆ ಯಾರನ್ನೂ, ಊಟಕ್ಕೆ ಕರೆಯುವದಿಲ್ಲವೆಂದು ಧೃಢನಿಶ್ಚಯ ಮಾಡಬಿಡಿ" ಎಂದು ನಿಶ್ಚಯವಾಗಿ ಕಾಂತಂ ಹೇಳಿದ ಮಾತಿಗೆ ನಾನು ದಿಗಿಲುಗೊಂಡೆ.

ಇನ್ನೇನು ಹೊತ್ತಾಯ್ತು. ಹೊರಗೆ ಹೋಗಬೇಕೆಂದು ಎದ್ದು ನಿಂತೆ. ಮನೆಯ ಮುಂಬಾಗಿಲಲ್ಲಿ ಓರ್ವ ಬ್ರಾಹ್ಮಣ "ಕಾಂತಂ ಎಂಬ ಮಹಾತಾಯಿಯ ಮನೆ ಇದೆ ಏನು ? " ಎಂದು ಕೇಳುತ್ತಾ ಮನೆಯೊಳಗೆ ಬಂದ.

"ಈ ಮನೆಯಲ್ಲಿ ವೆಂಕಟರಾಯರು ಇರುವರು" ಎಂದು ನಾನು ಹೇಳಿದೆ.

"ಹಾಗಾದರೆ ಈ ಮನೆಯಲ್ಲಿ 'ಕಾಂತಂ' ಎಂಬ ಹೆಣ್ಣುಮಗಳು ಇಲ್ಲವೆಂದ ಹಾಗಾಯಿತು ? ಅವರೆಲ್ಲಿರುವರು? " ಎಂದು ನಿರಾಶೆಯಿಂದ ನುಡಿದ ಆ ಬ್ರಾಹ್ಮಣನ ಮಾತಿಗೆ ಕಾಂತಂ ನಗುತ್ತ "ಇರಲಿ ಬನ್ನಿ ಸ್ವಾಮಿ, ಒಳಗೆ. ಇದೇ ಕಾಂತಂ ಇರುವ ಮನೆ. ನನ್ನ ಹೆಸರೇ ಕಾಂತಂ. ಏನು ಬೇಕಾಗಿತ್ತು ನಿಮಗೆ? " ಎಂದು ಉಪಚಾರದ ಮಾತನಾಡಿದಳು.

"ಸರಿ, ಸರಿ. ನೀವೇ ಕಾಂತಂ ಇರಲೀಬೇಕೆಂದು ನನಗಾಗಲೇ ತೋರಿತು. ವಜ್ರ ಎಲ್ಲಿಟ್ಟರೇನು? ಅದರ ಕಾಂತಿ ಕಡಿಮೆಯಾಗುವುದೇ ?"

"ನೀವು ಯಾರು ? ಯಾವ ಊರಿನವರು ನೀವು ?"

"ಎಲ್ಲಾ ಹೇಳ್ತೀನಿ. ರಾಮರಾಯರು ನಿಮ್ಮ ವಿಷಯ ಹೇಳಿರುವರು. ತಾವು ಸಂಪನ್ನರೆಂದೂ, ಸುಶಿಕ್ಷಿತರೆಂದೂ, ಉದಾರ ಹೃದಯಿಗಳೆಂದೂ, ನಡು ಶ್ರಾವಣದಲ್ಲಿ ಹೊಸ ನೀರಿನಿಂದ ತುಂಬಿ, ಹರುಷಭರಿತ ಮಂಡೂಕಗಳಿಂದ ತುಂಬಿದ ಸರೋವರದಂತೆ ನಿಮ್ಮ ಮನೆ ಯಾವಾಗಲೂ ಹರುಷದಿಂದ ತುಂಬಿ ತುಳುಕಾಡುತ್ತಿರುವುದೆಂದು ಕೇಳಿ...."

ಕಾಂತಂಳ ಮುಖ ಅರಳಿ ದೊಡ್ಡದಾಯಿತು. ತಳತಳ ಮಿನುಗುತ್ತಿದ್ದ ಅವಳ ಕಣ್ಣುಗಳು ಆಗಂತುಕನನ್ನೇ ನೋಡುತ್ತಿದ್ದವು. ಅವಳ ಕುತೂಹಲ ವನ್ನು ಕಂಡು ಅವನು "ಇಲ್ಲಿ ನೋಡಿ ಮಹಾತಾಯಿ. ನಾನೇನೋ ತಮ್ಮನ್ನು ಹೊಗಳೋಕೆ ಈ ಮಾತು ಆಡ್ತೇನೇಂತ ತಿಳಿದುಕೊಳ್ಳಬೇಡಿ. ರಾಮ ರಾಯರು ನನಗೆ ಎಲ್ಲಾ ಹೇಳಿರುವರು. ನಿಮ್ಮ ಮನೆತನದಲ್ಲಿರುವ ಅಚ್ಚು ಗಟ್ಟುತನ, ಸಿರಿ, ಸೌಭಾಗ್ಯ, ದೈವಭಕ್ತಿ, ಎಲ್ಲವೂ ಬಂಗಾರಕ್ಕೆ ಮಿನುಗು ಕೊಟ್ಟಂತೆ....ಎಲ್ಲಾ ಆ ಜಗನ್ನಾಟಕ ಸೂತ್ರಧಾರನ ಅನುಗ್ರಹ...." ಎಂದು ಹೊಗಳಿದ.

"ಮಹಾನುಭಾವರು ತಾವು. ನೀವೂ ಇಲ್ಲಿಗೆ ಬಂದುಬಿಟ್ಟಿರಿ; ಸರಿ. ತಮಗೇನುಬೇಕು? ನಾವು ಸಾಮಾನ್ಯ ಮನೆತನದವರು. ಬಡವರಾದ ನಮ್ಮಿಂದ ತಮಗೇನಾಗಬೇಕು? ನಿಮ್ಮಂತಹ ಸದ್ಬ್ರಾಹ್ಮಣರಿಗೆ ನಾವು ಹೇಗೆ ಅನುಕೂಲರಾಗಬೇಕು ?"

"ತಾಯಿ, ಏನು ನಿಮ್ಮ ವಿನಯ? ಮುಖಸ್ತುತಿಯ ಮಾತೆಂದು ಬೇರೆ ತಿಳಿಯಬೇಡಿ. ನಿಮ್ಮಲ್ಲಿಯ ಈ ವಿನಯ ನನ್ನನ್ನು ಮುಗ್ಧನನ್ನಾಗಿಮಾಡಿದೆ. ಅಮ್ಮಾ, ವಿನಯಾ ಅಂಬೋದು ಮಾನವನಲ್ಲಿರಬೇಕಾದ ರತ್ನದಂತಹ ಗುಣ. ನಿಮ್ಮ ನಿರ್ಮಲ ಹೃದಯ, ಅಂತಃಕರಣಪೂರಿತವಾದ ನಿಮ್ಮ ಮನಸ್ಸು, ಫಲ ಭರಿತ ವೃಕ್ಷಗಳಿಂದಲೂ, ಅನೇಕ ಪುಷ್ಪಲತೆಗಳಿಂದಲೂ ಶೋಭಿಸುವ ನಂದನ ವನದಂತಿದೆ...."

ಕಾಂತಂ ಇವನ ಮಾತುಗಳಲ್ಲಿಯ ಸ್ತುತಿಗೆ ಬೆರಗಾದಳು. ಮುಸಿಮುಸಿ ನಗುತ್ತ, "ಒಳಗೆ ಬರಬೇಕು" ತಮಗೆ ನನ್ನಿಂದ ಏನಾಗಬೇಕು ?" ಎಂದು ಕೇಳಿದಳು.

"ಛೇ, ಛೇ ಅಂತಹ ಕೋರಿಕೆ ನನಗಾವುದೂ ಇಲ್ಲ."

"ರಾಮರಾಯರ ಮುಖದಿಂದ ನಿಮ್ಮ ವಿಷಯ ಕೇಳಿದ್ದೆ. ಪ್ರತ್ಯಕ್ಷ ನೋಡಿಕೊಂಡು ಹೋಗೋಣವೆಂದು ಬಂದಿದ್ದೇನೆ. ಅಷ್ಟೆ ಮತ್ತೇನೂ ಇಲ್ಲ."

"ಆಯಿತು, ಮಧ್ಯಾಹ್ನ ಮೂರುಗಂಟೆಗೆ ಬನ್ನಿ. ಸ್ವಲ್ಪ ಪುರಾಣ ಹೇಳಿ ಫಲಹಾರ ಮಾಡಿ ಹೋಗಬಹುದು. ಈಗ ತಾವು ಹೋಗಬಹುದು."

"ನನ್ನದೊಂದು ಮಾತು. ಕೊಂಚ ಕೇಳಿ ತಾಯಿ. ಸಕಲ ಸಂಪನ್ನರಾದ ಸೌಂದರ್ಯವಂತರಾದವರನ್ನು ಕಂಡ ಆನಂದಕ್ಕೆ ಪಂಚಭಕ್ಷ್ಯ ಪರಮಾನ್ನದ ಊಟವೂ ಕಹಿಯೆಂದೇ ಭಾವಿಸಬೇಕು. ರಾಮರಾಯರ ಮನೆ ನೋಡಿ, ಹೇಳಲು ಮನಸ್ಸೇ ಬಾರದಂತಾಗುತ್ತದೆ. ಹೆಂಡತಿಗೆ ಕಾಯಿಲೆ, ಮನೆಯಲ್ಲಿ ಮಕ್ಕಳಿಲ್ಲ; ಅವರ ಮನೆಯ ಮುದುಕಿ, ಆತನ ತಾಯಿ ಇರಬೇಕು, ಬಹಳ ಜಿಪುಣಳು. ಇವರ ಮೇಲೆ ಮಕ್ಕಳಿಲ್ಲದ ಮನೇಲಿ ಊಟ ಮಾಡೋದೂಂದ್ರೆ ಅಡವಿಯಲ್ಲಿ ಕೂಳು ತಿಂದಂತೆ– ತಿಳಿಯಿತೇ ಇದು ರಹಸ್ಯ. ನಿಮ್ಮ ಮನೆ ನೋಡಿದರೆ ನನಗೆಷ್ಟು ಆನಂದ, ಉತ್ಸಾಹ! ಏನು ಹೇಳಲಿ ? ನಿಮ್ಮ ಮನೆಯ ಈ ಸುಂದರ ಚಿತ್ರವನ್ನು ದಿವ್ಯ ಶಿಲ್ಪಿಯೇ ಚಿತ್ರಿಸಬೇಕು."

"ಏನಂದ್ರೀ ನಮ್ಮ ಮನೇಲಿ ? ಬಡ ಸಂಸಾರಾನ ನೀವು ಹಾಸ್ಯ ಮಾಡೋ ಹಾಗಿದೆ? ಕೂಳು ಕಾಣದೇ ದರಿದ್ರರಂತೆ ಕಾಣುವ ನಮ್ಮ ಹುಡುಗರು........"

"ಛೇ! ಹಾಗೆನ್ನಬೇಡಿ ತಾಯಿ. ಜೀವನದ ಸತ್ಯಚಿತ್ರಗಳೇ ಇಂತಹವು ಇದೇ ಸೌಂದರ್ಯ. ಇದನ್ನು ಚಿತ್ರಿಸುವುದೇ ಉತ್ತಮ ಕಲಾವಿದನ ಕೆಲಸವಾಗಬೇಕು. ನಿಮ್ಮ ಮನೆ ಸಜೀವ ಚಿತ್ರಶಾಲೆಯಾಗಿದೆ."

"ಏನೋ ನಿಮ್ಮ ಆಶೀರ್ವಾದ. ತಮ್ಮ ಊರಾವುದು ?"

"ತೆನಾಲಿಯ ಹತ್ತಿರ ಇರುವ ಕುಂಚವರ."

" ತಾವು ತೆನಾಲಿಗೆ ಹೋಗುವುದುಂಟೇ ಯಾವಾಗಲಾದರೂ ? "

" ಅದೇಕಮ್ಮಾ. ದಿನವೂ ಹೋಗಲೇಬೇಕು. ಆ ಕೆಲಸ, ಈ ಕೆಲಸ, ಔಷಧ, ಮತ್ತೆ, ಮತ್ತೆ........ "

"ಔಷಧ ! ಯಾರಿಗೆ ಮಹಾಸ್ವಾಮಿ ?"

"ನನಗೇನೂ ಅಲ್ಲಮ್ಮಾ ! ನಮ್ಮ ಮನೇ ಮುದುಕಿಗೆ ಖಾಯಿಲೆ. ಅವಳು ಬದುಕೋದಿಲ್ಲಾಂತ ನೆನೆದಿದ್ದೆ. ತೆನಾಲೀಲಿ ಡಾಕ್ಟರ್ ಮಾಡಿದ ಸಹಾಯ ಮರೆಯಲಾರೆ. ಇನ್ನೂ ಚಿಕ್ಕವರು: ಏನವರ ಕುಶಲತೆ? ಅವರು ನಿಜವಾಗಿ ಆ ಮುದುಕಿಗೆ ಪ್ರಾಣದಾನ ಮಾಡಿದರು. ಇನ್ನೇನು ಸಾಯೋ ಸ್ಥಿತಿಯಲ್ಲಿದ್ದ ಆ ಮುದುಕಿ ಬದುಕುವಂತೆ ಮಾಡಿದ ಪುಣ್ಯ ಅವರದು. ವಯಸ್ಸು ಸಣ್ಣದಾದ್ರೂ ಬಹಳ ಜಾಣರು. ತಣ್ಣನೆಯ ಹೊತ್ತಿನಲ್ಲಿ ಅವರನ್ನು ನೆನೆಯಬೇಕು. ಪುಣ್ಯಾತ್ಮ ಬದುಕಿರಲಿ. ಆ, ಅವರ ನೆನಪಾಯಿತು. ಡಾಕ್ಟರ್ ಶ್ರೀರಾಮಮೂರ್ತಿಗಳು, ನಿಜವಾಗಿಯೂ ಸರ್ವ ಗುಣಗಳಲ್ಲಿಯೂ ಶ್ರೀರಾಮಚಂದ್ರನೇ ಸರಿ. "

"ಆ, ಆತ ನನ್ನ ಸದ್ಯ ತಮ್ಮ........ ನನ್ನ ಒಡಹುಟ್ಟಿದಾತ" ಎಂದು ಬಹು ಉತ್ಸಾಹದಿಂದ ಹೇಳಿ ಹಿಗ್ಗಿದಳು. ಅವಳ ಎದೆಯೂ ಹಿಗ್ಗಿದಂತೆ ನನಗೆ ಭಾಸವಾಯಿತು.

ಇವಳಲ್ಲಿ ಉಂಟಾದ ಮಾರ್ಪಾಟನ್ನು ಆ ಬ್ರಾಹ್ಮಣ ಕಂಡು ತನ್ನ ಕೆಲಸ ಆಗುವ ಸಮಯ ಬರುತ್ತಿದೆಯೆಂದು ಭಾವಿಸಿ ತನ್ನ ಬಲೆಯನ್ನು ಚೆನ್ನಾಗಿ ಬೀಸತೊಡಗಿದ.

"ಹಾಗೇನ್ರೀ ! ಅವರು ನಿಮ್ಮ ಒಡಹುಟ್ಟಿದವರೇ ? "

"ಅಹುದ್ರೀ ! ಅಹುದ್ರೀ ! ಮತ್ತೇನು ?"

"ಆ, ತಿಳೀತು ಬಿಡ್ರಿ. ಗುಲಾಬಿ ಮೊಗ್ಗು ಎಲ್ಲಿದ್ದರೇನು ? ಅದು ಬಿಡುವ ಹೂ ಒಂದೇ ಬಗೆಯದಲ್ಲವೆ ? ಅದರ ವಾಸನೆಯೂ ಒಂದೇ ಬಗೆಯದಾಗುವುದು. ಬರ್ತೀನಿ ತಾಯಿ ಇನ್ನು,— ನಾ ಬರಲೆ ? ಎಂತಹ ಸುದಿನ ಇವತ್ತು ?........ಅಲ್ಲಾ ನೀವಿಬ್ಬರೂ ಒಂದೇ ತಾಯಿ ಮಕ್ಕಳೇನ್ರಿ?"

"ನಿಜವಾಗಿಯೂ ಒಂದೇ ತಾಯಿ ಮಕ್ಕಳು" ಎಂದು ಕಾಂತಂ ತನ್ನ ಒಪ್ಪಿಗೆಯನ್ನು ಸೂಚಿಸುವಾಗ ಅವಳ ಮುಖದಲ್ಲಿ ಗರ್ವದ ಚಿನ್ಹೆ ಮೂಡಿತ್ತು.

"ಏನು ಸುಕೃತ ನಿಮ್ಮನ್ನು ಹಡೆದ ಆ ಮಹಾತಾಯಿಯದು ? ಅವರ ಹೊಟ್ಟೆ ತಣ್ಣಗಿರಲಿ. ಅವರು ನಿಜವಾಗಿಯೂ ಮಹಾ ಭಾಗ್ಯಶಾಲಿಗಳು. ಇಂತಹ ಮಕ್ಕಳ ತಾಯಿಯಾಗುವುದು ಪೂರ್ವಜನ್ಮದ ಸುಕೃತ.

"ಆದುದರಿಂದಲೇ ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲೇ ಪರಲೋಕವನ್ನೈದಿದಳು" ಎಂದು ಕಾತಂ ಕಣ್ಣೀರಿಟ್ಟಳು.

"ಹಾಗೇನು. ಪಾಪ....ಅವರ ಒಳ್ಳೇತನಾನ್ನ ತಮ್ಮಂಥ ಮಕ್ಕಳಿದ್ದು ಅವರ ಹೆಸರನ್ನು ಅಜರಾಮರವನ್ನಾಗಿಸಿರುವಿರಿ. ಆ ಡಾಕ್ಟರರು ಬಡಬಗ್ಗರಲ್ಲಿ ತೋರುತ್ತಿರುವ ಕನಿಕರ, ಅಪಾರ ಸಹಾಯ, ಇವುಗಳನ್ನು ಜನರು ನೆನೆದು ನೆನೆದು ಆತನನ್ನು ದೇವರೆಂದು ಭಕ್ತಿಯಿಂದ ಕಾಣುತ್ತಿರುವರು. ಇವುಗಳೆಲ್ಲವನ್ನೂ ಮೇಲಿನ ಲೋಕದಿಂದ ನೋಡುತ್ತ ಹರಸುತ್ತಿರುವ ಆ ಮಹಾತಾಯಿಗೆಷ್ಟು ಆನಂದವಾಗಿರಬೇಕು? ಇದ್ದಾಗ ಅವರು ಕಾಣದಂಥ ಆನಂದವನ್ನು ಈಗಾದರೂ ಪಡೆಯುತ್ತಿದ್ದಾರಲ್ಲ......" ಎಂದು ಆ ಬ್ರಾಹ್ಮಣ ಸುಳ್ಳೇ ಕಣ್ಣೀರು ತೆಗೆದ.

"ಹಾಗೇನು?" ಎಂದು ಅವನ ಮಾತಿಗೆ ಧ್ವನಿಗೂಡಿಸಿದಳು ಕಾಂತಂ.

ಹೊತ್ತು ಹತ್ತುಗಂಟೆಯಾಗಿತ್ತು. ಆ ಹೊತ್ತಿಗೆ ಆತ ತೀರ ಹತ್ತಿರದ ಬಂಧುವಿನಂತೆ, ಮನೆ ಮಕ್ಕಳ ಹೆಸರುಗಳನ್ನೆಲ್ಲ ತಿಳಿದು ಅವರನ್ನು ಎತ್ತಿಕೊಂಡು ಪ್ರೀತಿಯಿಂದ ಮುದ್ದಾಡಿ, ಮನೆಯಾಕೆಯನ್ನುದ್ದೇಶಿಸಿ "ಇನ್ನು ನಾ ಬರ್‍ತೇನಮ್ಮ" ಎಂದು ಹೊರಗೆ ಹೋಗುವುದರಲ್ಲಿರುವಾಗ ಕಾಂತಂ "ತಾವು ಈ ಒಂದು ಹೊತ್ತು ಇಲ್ಲೇ ಊಟ ಮಾಡಿ ಹೋಗಬೇಕು" ಎಂದು ಕೇಳಿಕೊಂಡಳು.

"ಬೇಡಮ್ಮಾ. ರಾಮರಾಯರೇನೆಂದುಕೊಂಡಾರು?"

"ಅವರೇನೆಂದುಕೊಳ್ತಾರೆ? ತಮ್ಮ ಊಟ ಇವತ್ತು ಇಲ್ಲೇ ಆಗಬೇಕು. ನಾವೆಲ್ಲಾ ಗುಂಟೂರು ಜಿಲ್ಲೆಯವರು. ಆದರಲ್ಲಿ ತಮ್ಮಂತಹ ಸತ್ಪುರುಷರು,

ವಿದ್ಯಾವಂತರು, ಹಿರಿಯರು, ನಮ್ಮ ಮನೇಲಿ ಆತಿಥ್ಯ ಸ್ವೀಕರಿಸೋದೊಂದ್ರೆ ನಮ್ಮ ಪುಣ್ಯಾಂತ ತಿಳೀತೀವಿ.''

"ತಾಯಿ ಏನು ನಿಮ್ಮ ವಿನಯ? ಹುಟ್ಟಿದ ಮಗಳಂತೆ ನನ್ನ ನೀವು ಆದರ ಮಾಡ್ತಾ ಇದೀರಿ ಅಂದ ಮೇಲೆ ನಿಮ್ಮ ಮನಸ್ಸು ಯಾಕೆ ನೋಯಿಸ ಬೇಕು? ಆಗಲಿ........ಕಾಲುವೆ ಎಲ್ಲಿದೆ? ಹೇಗೆ ಹೋಗಬೇಕು? ಈ ಗಂಟು ಮೂಟೆ ಎಲ್ಲಿಡಬೇಕು?''

"ಇದೇ ರಸ್ತೇಲಿ ಹೋದ್ರೆ ಸಿಕ್ಕುತ್ತೆ ಕಾಲುವೆ? ಸಂಧ್ಯಾವಂದನೆ ಪೂರ್ಣ ಸಂಜೆಗೆ ಮಾಡಿದ್ರಾಯ್ತು. ಅವರು ಹನ್ನೊಂದಕ್ಕೆ ಶಾಲೆಗೆ ಹೋಗ ಬೇಕು. ಬೇಗ ಬಂದು ಬಿಡಿ."

"ಈಗ ಬಂದು ಬಿಟ್ಟೆ. ಎರಡೇ ನಿಮಿಷ." ಎಂದು ಆತ ಹೋಗಿಬಿಟ್ಟ.

ಕಾಂತಂ ಅತಿ ಉತ್ಸಾಹದಿಂದ ಮಾಳಿಗೆ ಹತ್ತಿ ಬಂದು "ನೋಡ್ರಿ, ಸದ್ಬ್ರಾಹ್ಮಣ, ವಿದ್ಯಾವಂತ, ನಮ್ಮ ಮನೆಯವರೆಲ್ಲರ ಪರಿಚಯ ಉಳ್ಳವರು, ನಮ್ಮ ಗುಂಟೂರು ಜಿಲ್ಲೆಯವರಂತೆ ಅವರು. ನಿಮಗೆ ಗೊತ್ತೇ ಇಲ್ವೇನು?" ಎಂದು ಒಂದೇ ಉಸುರಿನಲ್ಲಿ ಹೇಳಿದಳು.

''ಅಹುದು. ನಮ್ಮವರೆಲ್ಲರ ಪರಿಚಯವಿದ್ದರೇನಂತೆ?"

''ಸ್ನಾನ ಮಾಡಿ ಈಗ ಬರ್ತಾರೆ; ನಮ್ಮ ಮನೇಲೇ ದೇವರ ಪೂಜೆ ಆಗ ಲೆಂದು ಕೇಳಿಕೊಂಡೆ."

''ಅಂತೂ ಆತ ನಿಂಗೆ ಒಳ್ಳೇ ಉಲ್ಲನ್ ಟೋಪಿ ಹಾಕಿದಾಂತನ್ನು."

''ಸಾಕು ಬಿಡ್ರೀ ನಿಮ್ಮ. ನಿಮಗೆಲ್ಲಾ ಕುಚೇಷ್ಟೇನೆ. ಅಂಥ ವೇದ ಪಾರಂಗತನಾದ ಸತ್ಪುರುಷನನ್ನು ಆಡಿಕೊಂಡರೆ ಕಣ್ಣು ಹೋಗ್ತಾವಂತೆ. ಮಹಾರಾಯ್ರೆ ಸುಮ್ಮನಿರ್ರಿ: ಮಕ್ಕಳಿದ್ದ ಮನೆ; ಹಾಲುತುಪ್ಪ ಎಂದು ಹೇಳಿ."

'' ಅದು ತಿಳಿಯಿತು. ಈಗ ನಾನೇನು ಮಾಡಬೇಕು ? "

"ಸ್ವಲ್ಪ ಪೇಟೆಗೆ ಹೋಗಬೇಕು....ಇವತ್ತು ಶನಿವಾರ; ಪಲ್ಯ ಕಾಯಿ, ವೀಳೆದೆಲೆ, ಅಡಕೆ,....ಗೋಡಂಬಿ, ದ್ರಾಕ್ಷಿ....ಕೇಳಿಸ್ತೇನು?....ನೋಡ್ರೀ.... ಹಾಗೇ ಕೇಸರೀನೂ ಬೇಕು.... ಹಾಗೇಕೆ ಮುಖ ಅತ್ತ ತಿರುವುತ್ತೀರಿ?

ಹಾದೀಲಿ ಬರೋವಾಗ ಗವಳೀ ಗಲ್ಲೀಲಿ ಒಂದೆರಡು ಸೇರು ಹಾಲು ಬೇಗ ಕಳಿಸೂಂತ ಯಲ್ಲಪ್ಪನಿಗೆ ಹೇಳಿ ಹೋಗ್ರಿ....ಮರೀಬ್ಯಾಡ್ರೀ ಮತ್ತೆ.''

''ಅಲ್ಲಾ ಇವೆಲ್ಲಾ ಈಗಲೇ ತರೋದಕ್ಕೆ ಇಪತ್ತು ತಾರೀಕು ಮೂವತ್ತೊಂದು ತಿಳೀತೆ....ಹಣ ಎಲ್ಲಿದೆ?''

''ಅದೇನು ನಂಗೆ ತಿಳಿಯೋ ಮಾತಲ್ಲ....ಕೈಲಿ ಇಲ್ಲದಿದ್ದರೆ ಸಾಲಾ ಮಾಡಿಯಾದ್ರೂ....ಈ ಕೆಲಸ ಆಗಲೇಬೇಕು.''

ಅದು ಸರಿ ಕಾಂತಂ. ಮುಂಜಾನೆ ನಾವು ಆಡಿಕೊಂಡ ಮಾತೇನು? ನಮ್ಮ ನಿರ್ಣಯಾ ಏನು? ನೀನು ಹೀಗೆ........''

"ನಾಳೆ ವಿಚಾರವಿನಿಮಯ ಮಾಡೋಣ. ನನಗೀಗ ಚರ್ಚೆಗೆ ಕೂಡೋಕೆ ಸಮಯ ಇಲ್ಲ. ಅಡುಗೇ ಮನೇಲಿ ಕೆಲಸ ಇದೆ. ನನ್ನ ಮಾತು ಕೊಂಚ ಕೇಳಿ. ಪೇಟೆಗೆ ಹೋಗಿ ಬರ್‍ರಿ. ಮತ್ತೆ ಅಲ್ಲೇ ಯಾರೊಂದಿಗಾದ್ರೂ ಹರಟೆ ಕೊಚ್ಚುತ್ತ ನಿಲ್ಲಬೇಡೀಂದೆ. ಬೇಗ ಬರಬೇಕು. ಇಲ್ಲಿ ನೋಡಿ ಈ ಕೈಕೂಸು ಕೂಂಚ ಕಾಡ್ತಾ ಇದೆ. ಸ್ವಲ್ಪ ಹೆಗಲಲ್ಲಿ ಹಾಕ್ಕೊಂಡು ಹೋದ್ರೆ ಅನುಕೂಲ ಆಗುತ್ತೆ, ಮನೇಲಿ ಕೆಲಸಾನೂ ಬೇಗ ಮುಗಿಯುತ್ತೆ."

ಕಾಂತಂಳ ಈ ಮಾತನ್ನು ಕೇಳಿ ನನ್ನ ತಲೆ ಬಿಸಿಯಾಯಿತು; ಹೆಚ್ಚು ಮಾತನಾಡಿದರೆ ಪ್ರಸಂಗ ವಿಕೋಪಕ್ಕಿಟ್ಟುಕೊಳ್ಳಬಾರದೆಂದು ಚಟಕ್ಕನೆ ಎದ್ದು ನಿಂತು ಕೋಟು ಹಾಕಿಕೊಂಡು ಅವಳನ್ನೂ ನೋಡದೆ ಮನೆಯಿಂದ ಹೊರಬಿದ್ದೆ.






ಕಾಂತಂ, ಕಾಂತಂ, ಬಾಗಿಲು.

ಒಳಗಿನಿಂದ ಕಾಂತಂ ಬಂದು ಬಾಗಿಲು ತೆಗೆದಳು.

ಟೀ ತಯಾರಾಗಿದೆಯೆಂದು ಹೇಳಿದಳು.

ಕೊಡಬಹುದಲ್ಲವೆ ?

ಒಳಗೆ ಬರಬಹುದಲ್ಲವೆ ?

ಕಾಂತಳಿಗೆ ಟೀ ಯೆಂದರೆ ಬೇಸರ. ನಾನು ಟೀಜರ್ ಉದ್ಯೋಗದಲ್ಲಿದ್ದು ಹೇಗೋ ಕಾಲಕಳೆಯುತ್ತಲಿದ್ದೇನೆ. ಸಂಸಾರ ಹಾಗೂ ಹೀಗೂ ಸಾಗುತ್ತಿದೆ. ಈ ಬಡ ಸಂಬಳದಲ್ಲೇ ಹವ್ಯಕವ್ಯ ಎಲ್ಲಾ ಖರ್ಚುಗಳು ನಡೆಯಬೇಕು. ಇಂತಹ ನಮ್ಮ ಸಾಮಾನ್ಯ ಜೀವನದಲ್ಲಿ ಒಡವೆಗಳನ್ನು ಮಾಡಿಸಲಿಲ್ಲವೆಂದೇ ಅವಳಿಗೆ ಸಿಟ್ಟು.

ಹೀಗಿರುವಾಗ ಒಂದು ದಿನ ತಿಂಗಳಿನ ಆದಾಯ ವ್ಯಯದ ಮಾತನ್ನೆತ್ತಿಕೊಂಡು ವಿವರವಾಗಿ ಮಾತನಾಡುವ ಉದ್ದೇಶದಿಂದ ಕುಳಿತೆವು. ಯಾವ ಬಗೆಯ ಖರ್ಚು ಕಡಮೆ ಮಾಡಬಹುದೆಂಬುದನ್ನು ನಿರ್ಧರಿಸಲು ಆಲೋಚನೆ ನಡೆಯಿತು.

ಮೇಲಿನಿಂದ ಕೆಳಗೆ ಪಟ್ಟಿಯೊಂದನ್ನು ತಯಾರಿಸಿದೆವು. ಎಲ್ಲವೂ ಅವಶ್ಯವಾದವುಗಳೇ. ಉಪ್ಪುಬೇಕು, ಅಕ್ಕಿಬೇಕೇ ಬೇಕು. ಇತರ ಸಾಮಾನುಗಳ ಬಗ್ಗೆ ಚರ್ಚೆ ನಡೆಯಿತು.

ತಿಂಗಳಿಗೆ ಎರಡು ಸಾಬೂನುಗಳೇಕೆ ಕಾಂತಂ?

ಅಹುದು ಪಾಪ! ಎಂತೆಂತಹದಕ್ಕೋ ಹಣ ಹಾಳಾಗಿ ಹೋಗುತ್ತಿರುವಾಗ, ಇದಕ್ಕೇ ಬಂತು ಆಕ್ಷೇಪಣೆ.

ಮತ್ಯಾವ ಖರ್ಚು ಕಡಮೆ ಮಾಡಬೇಕು?

ನನಗೇನು ಗೊತ್ತಾಗವಲ್ಲದು.

ಅಹುದು ಕಾಂತಂ. ನಿನಗೇನು ಗೊತ್ತು ಪಾಪ! ಪ್ರತಿ ತಿಂಗಳೂ ಎರಡೆರಡು ಜಾಕೀಟುಗಳಿಗೆ ವಾಯಿಲ್ ಅರಿವೆ ಕೊಳ್ಳಲು ಮಾತ್ರ ...?

ಅತ್ತ ಹಾಗೇ ಅದೆ ನಿಮ್ಮ ಮಾತು. ಮೈಮುರಿಯುವಷ್ಟು ಒಡವೆ ಹಾಕಿ ನನ್ನ ಮಾತು ನಡೆಸಿಕೊಟ್ಟಿರಿ. ಪಾಪ ಅರಿವೆಗಳನ್ನು ಕೇಳಿದ ಹಾಗೆಲ್ಲಾ ಪಿಟಕ್ಕೆನ್ನದೆ ತಂದುಕೊಡುತ್ತಿರುವಿರಿ. ಮೈಮುಚ್ಚಲು ಅರಿವೆ ಸಹಿತ ಬೇಡವೆನ್ನುತ್ತೀರಾ?

ಮತ್ತೇನು ಮಾಡಬೇಕು ಹೇಳು ಕಾಂತಂ.

ಏನು ಮಾಡಬೇಕೇ? ನಿಮ್ಮ ಆ ಹಾಳು ಟೀ ಕುಡಿಯುವ ಅಭ್ಯಾಸ ಬಿಟ್ಟುಬಿಡಿ. ಅದೊಂದು ಬಿಟ್ಟುಬಿಟ್ಟರೆ ಎಷ್ಟೊಂದು ಉಳಿತಾಯ, ಏನು ಕಥೆ? ದಿನಕ್ಕೆ ಮೂರು ಸಲ. ಮತ್ತೆ ಯಾರಾದರೂ ಮಿತ್ರರು ಬಂದರೆ ಎಂಟು ಸಲ. ಇದಕ್ಕಾಗುವ ಖರ್ಚಿನ ಲೆಕ್ಕವಾದರೂ ಮಾಡಿರುವಿರಾ?

ಆ ಏನಂದೆ? ಟೀ! ಟೀ ಬಿಟ್ಟುಬಿಡಬೇಕೇ? ಟೀ ಕುಡಿಯದಿದ್ದರೆ ನನಗೆ ಯೋಚನೆಯೇ ಹರಿಯುವುದಿಲ್ಲ.

ಏಕೆ ಹರಿಯುವುದಿಲ್ಲ? ಏನಾದರೊಂದು ಕೆಲಸದಲ್ಲಿ ಮಗ್ನರಾದರೆ ಮುಗಿಯಿತು.

ಅಲ್ಲಾ ಕಾಂತಂ. ಮನಸ್ಸು ಸ್ಥಿರವಾಗಿರಬೇಡವೆ ಕೆಲಸದಲ್ಲಿ ತೊಡಗುವುದಕ್ಕೆ ?

ಮನಸ್ಸಿದ್ದರೆ ಮಾರ್ಗವ. ಆ ಕೆಲಸವಮಾಡಬೇಕು, ಈ ಕೆಲಸ ಮಾಡಬಾರದೆಂದು ಯೋಚಿಸುವ ಮನಸ್ಸಿದ್ದರಾಯಿತು. ಇದನ್ನು ನಿರ್ಧರಿಸಲು ಟೀ ಬೇಕೇಬೇಕೇನು ? ಇದನ್ನು ಕುಡಿದರೇನೇ ಮನುಷ್ಯನಿಗೆ ನಿಶ್ಚಲ ಶಕ್ತಿ ಬರುವುದೇನು?

ಆದುದರಿಂದಲೇ ಆ ಅಭ್ಯಾಸವನ್ನು ಬಿಡದೇ ಇರಬೇಕಾಗಿದೆ.

ಅಂತಹ ಮಾತೇಕ್ರೀ. ನಿಮ್ಮ ಈ ಚಟ ನಾನು ನಿಲ್ಲಿಸಲೇ?

ನಾನು ಅದನ್ನು ಬಿಡುವುದಕ್ಕಾಗುವುದಿಲ್ಲ. ನಿನಗೆ ಬಿಡಿಸುವುದಕ್ಕೂ ಆಗುವುದಿಲ್ಲ.

ನನ್ನ ಈ ಕಾರ್ಯದಲ್ಲಿ ನಾನು ಜಯಶಾಲಿಯಾದರೆ?

ಜಿದ್ದೇನು?

ನನಗೇನು ಕೊಡುವಿ. ನಿಮ್ಮ ಈ ಅಭ್ಯಾಸ ನಿಲ್ಲಿಸಿದರೆ?

ನೀನು ಏನು ಬೇಡಿದರೆ, ಅದು.

ಹಾಗಾದರೆ ನೋಡಿ ನನ್ನ ತಮಾಷೆ.

ಕಾಂತಂ ಬಲು ಜಾಣೆ. ಅವಳೊಬ್ಬ ಮಾಟಗಾತಿ. ಹೇಗಾದರೂ ಮಾಡಿ ನನ್ನ ಈ ಚಟ ನಿಲ್ಲಿಸುವಳೆಂದು ನನಗೆ ಭಯವೆನಿಸಿತು. ಅವಳು ಹಟತೊಟ್ಟಳೆಂದರೆ ಸಾಧಿಸಿಯೇ ಬಿಡುವಳು. ಇದು ನನ್ನ ಅನುಭವ. ಅವಳು ಹೂಡುವ ಜಾಲವೆಂತಹದೆಂಬುದನ್ನು ಮೊದಲೇ ಊಹಿಸುವುದು ಅಶಕ್ಯ. ಹೀಗೆಂದು ಯೋಚಿಸಿ ನಾನು ಕೊಂಚ ಎಚ್ಚರದಿಂದಲೇ ಇರತೊಡಗಿದೆ. ಅಂದೇ ನಮ್ಮ ವೈನಿ ಸಾಹೇಬರೂ ಬಂದಿದ್ದರು ಬೇರೆ. ಅವರಿಬ್ಬರ ನಡುವೆ ಏನೇನೋ ಮಾತುಕತೆಗಳು ನಡೆದವು; ಪಿಸುಮಾತುಗಳೂ ಕಿವಿ ಕಚ್ಚಾಟಗಳೂ ಆದವು. ಈ ತುಂಟ ಹುಡುಗಿ, ನನ್ನ ವೈನಿ ಇಬ್ಬರೂ ಸೇರಿ ನನ್ನ ಮೇಲೆ ಏನಾದರೂ ಒಳಸಂಚು ನಡೆಸುವರೆಂದು ಭಯಗೊಂಡೆ. ಅವರಿಬ್ಬರೂ ನನ್ನನ್ನು ನೋಡಿ ಅನೇಕ ಸಲ ನಗುತ್ತಿರುವುದರ ಅರ್ಥ ನನಗಾಗಲಿಲ್ಲ.

ಹೆಂಗಸರು ಏನನ್ನಾದರೂ ಮಾಡಲು ಸಾಹಸಿಗರೇ. ಇವರೇ ರಾಜ್ಯ ಸಾಮ್ರಾಜ್ಯಗಳ ಏಳಿಳಿತಗಳಿಗೆ ಮುಖ್ಯರೆಂದು ಇತಿಹಾಸ ಹೇಳುತ್ತಿದೆ. ಇತಿಹಾಸವೇ ಏಕೆ ನಮ್ಮ ಕಾಂತಂಳ ಮೂಲಕ ಮನೆಯಲ್ಲೇ ಎಷ್ಟು ಯುದ್ಧಗಳಾಗಿ ಹೋಗಿಲ್ಲ? ಹೆಣ್ಣಿನ ಪ್ರೋತ್ಸಾಹದಿಂದಲೇ ಅಲ್ಲವೆ, ಆದಿಯಲ್ಲಿ ಪುರುಷನು ಪಾಪಕಾರ್ಯ ಮಾಡಹೊರಟಿದುದು?

ಅಂದು ನಾನು ಬಹು ಎಚ್ಚರದಿಂದ ಇರಬೇಕೆಂದು ನಿಶ್ಚಯಿಸಿದೆ. ಅವಳ ಒಳಸಂಚಿನಿಂದ ನಾನು ಬಯಸಿದ ಕಾರ್ಯನಿರ್ವಾಹವಿಲ್ಲದೆ, ನನ್ನ:ಅವ

ಮಾನವೂ ಆಗುವುದೆಂದು ಅವಳಿಗೆ ಹಿಗ್ಗು, ನನಗೆ ಯೋಚನೆ, ಭಯ. ಈ ಉಭಯ ಸಂಕಟಗಳು ನನ್ನನ್ನು ಎಚ್ಚರದಲ್ಲಿರಲು ಪ್ರೇರೇಪಿಸಿದರೂ, ಭಯವು ಮಾತ್ರ ಆವರಿಸಿತ್ತು.

ನನ್ನ ಗ್ರಹಬಲವೇ ಅಂತಹದು. ಉಡುಪಿಯಿಂದ ಬಂದ ಪಂಚಾಂಗ ತೆಗೆದು ನೋಡಿದೆ. ಅದರಲ್ಲಿ "ಈ ತಿಂಗಳಲ್ಲಿ ನಿಮಗೆ ದೊಡ್ಡ ಅವಮಾನವಾಗುವುದು" ಎಂದು ಬರೆದಿತ್ತು. ಇದಕ್ಕೆ ನಾನು ಭಯಪಡಲು ಮತ್ತೊಂದು ಕಾರಣವೂ ಇತ್ತು.

ಆದರೂ ಎಚ್ಚರದಿಂದಲೇ ವರ್ತಿಸತೊಡಗಿದೆ. ಮುಂಜಾನೆ ಎದ್ದ ಕೂಡಲೇ ನನ್ನ ತಲೆಗೂದಲುಗಳು ಸಮವಾಗಿರುವದನ್ನು ಕಂಡು, ಅವುಗಳನ್ನು ಸರಿಪಡಿಸಿಕೊಂಡು, ಮಂಚದ ಕೆಳಗೆ ಮೇಲೆ ಏನೂ ಅಪಾಯವಿಲ್ಲವೆಂದು ನಿರ್ಧರಿಸಿಕೊಂಡು, ಮೊದಲನೆಯ ಗಂಡಾಂತರದಿಂದ ಪಾರಾದೆನೆಂದು ಧೈರ್ಯಗೊಂಡು ಮುಂದೆ ಸಾಗಿದೆ. ಕೊಂಚ ಧೈರ್ಯವೂ ಬಂತು.

ಆದರೆ ಇಷ್ಟು ಮಾತ್ರಕ್ಕೇ ನಾನು ಹಿಗ್ಗುವಂತಿರಲಿಲ್ಲ. ಮನೆ ಸಾರಿಸಿ ರಂಗೋಲಿ ಇಕ್ಕಿದರೆ ಹಬ್ಬ ಮಾಡಿದಂತಾಯಿತೆ? ದಿನವಿನ್ನೂ ಕಳೆಯಲು ಹತ್ತು ತಾಸಿದೆ. ಈ ವೇಳೆಯಲ್ಲಿ ಏನೇನು ಅನಾಹುತಗಳು ಆಗುವವೋ ಯಾರು ಬಲ್ಲರು? ಅವಳ ಸನ್ನಾಹಶಕ್ತಿಯನ್ನು ಅರಿಯುವುದು ಬಹು ಕಷ್ಟ ಅಂದು ಊಟದಲ್ಲಿ ಪಲ್ಯಕಾಯಿಗಳನ್ನು ಪರೀಕ್ಷಿಸಿ ಊಟ ಮಾಡಿದೆ. ಹುಳಿಯಲ್ಲಿ ಉಪಯೋಗಿಸಿದ ಕಾಯಿತುಂಡುಗಳನ್ನು ಸರಿಯಾಗಿ ನೋಡಿದೆ. ಮಧ್ಯಾಹ್ನ ನಿದ್ರೆ ಮಾಡದೆ ಆರಾಮ ಕುರ್ಚಿಯಲ್ಲಿ ಮಲಗಿ ಪುಸ್ತಕದಲ್ಲಿ ಮಗ್ನನಾದಂತೆ ನಟಿಸಿದೆ. ಈ ನಟನೆಯ ಮೂಲಕ ಅವರೇನು ಮಾಡುತ್ತಿರುವರೆಂಬುದನ್ನು ತಿಳಿಯಲೆತ್ನಿಸಿದೆ. ಅವರು ಪಕ್ಕದ ಕೋಣೆಯಲ್ಲಿದ್ದುದರಿಂದ ನನಗವರ ಮಾತು ಕೇಳಿಸಲಿಲ್ಲ. ಕೇಳಿಸಿದ ಮಾತು ಅರ್ಥವಾಗಲಿಲ್ಲ. ಅವುಗಳ ವಿವರ ಹೀಗಿತ್ತು.

ನಿಜವಾಗಿಯೂ.

ಮತ್ತೇನು ?

ಆದಾದ ಮೇಲೆ ನಿನ್ನೊಂದಿಗೆ ನನ್ನನ್ನೂ ಆತ ಬೈದರೆ ?

ಇಬ್ಬರೂ ನಕ್ಕುಬಿಟ್ಟರು ಕೊಂಚ ಸಮಯ. ಆ ಮೇಲೆ ನನ್ನ ಅತ್ತಿಗೆ (ವೈನಿ) ಯವರು ಪಾಪ ಆತನಿಗೆ ಈ ಅವಮಾನ ತಡೆಯಲಾಗುವುದಿಲ್ಲ ವೇನೋ ಎಂದು ನುಡಿದಳು.

ನಾನಲ್ಲವೆ ಆ ಕಾರ್ಯ ಸಾಧಿಸುವುದು? ನಿನಗೇಕೆ ಭಯ? ಎಂದು ಕಾಂತಂ ಧೈರ್ಯದಿಂದ ಎತ್ತಿದ ಸ್ವರದಲ್ಲಿ ನುಡಿದಳು.

ಇದಾದನಂತರ ಮತ್ತೆ ಕಿವಿಮಾತು. ಕೊನೆಗೆ ಇಬ್ಬರೂ ಗೊಳ್ಳೆಂದು ನಕ್ಕು ಎದ್ದು ನಿಂತಂತೆ ಭಾಸವಾಯಿತು. ಅವರ ಎತ್ತರದ ನಗು ನನ್ನನ್ನು ಯೋಚನೆಯಲ್ಲಿ ಕೆಡವಿತು. ಮನಶ್ಶಾಂತಿ ಇರಲಿಲ್ಲ. ಅವರ ಮಾತಿನ ಸರಣಿಯಂತೆ ನನಗೆ ಬಹು ದೊಡ್ಡ ಅವಮಾನ ಕಾದು ನಿಂತಂತೆ ಕಂಡು ಬಂತು. ಅವರ ಮುಸಿಮುಸಿ ಮಂದಹಾಸದ, ಅರ್ಥವಂತೂ ನನಗಾಗಲೇ ಇಲ್ಲ. ಇಂತಹ ದೀರ್ಘ ಪ್ರಸಂಗದಲ್ಲಿ ಅವರ ಈ ಮಂದಹಾಸ, ನಕ್ಕುನಲಿಯುವಿಕೆಯ ಅರ್ಥವೇನೆಂಬುದನ್ನು ತಿಳಿಯುವುದಾಗಲಿಲ್ಲ. ಕಾಂತಂಳ ಅಂದಿನ ಧೋರಣೆಯಲ್ಲಿ ಅವಳಲ್ಲಿ ಕಾಣಿಸಿಕೊಂಡ ಭಯ ಮತ್ತು ಸಂತೋಷ ಭಾವನೆಗಳ ಅರ್ಥವೇನೆಂಬುವುದು ನನಗೆ ವ್ಯಕ್ತವಾಗಲಿಲ್ಲ. ಈ ಬಗೆಯ ಹಾಸ್ಯದ ಲಹರಿ ನನ್ನನ್ನು ಅವಮಾನಿಸುವುದಕ್ಕೆಂದು ನಾನೆಂತು ಭಾವಿಸುವುದು ? ಇದರಲ್ಲಿ ಮೋಸವಿರುವುದೆಂದು ನಾನೆಂತು ಊಹಿಸಬೇಕು? ತನ್ನ ಈ ಒಳಸಂಚಿನಿಂದ ನಾನೆಲ್ಲಿ ಕೋಪಿಸಿಕೊಳ್ಳುವೆನೋ ಎಂಬ ಭಯವೊಂದು ಕಡೆ, ತಾನು ತನ್ನ ಕಾರ್ಯದಲ್ಲಿ ಗೆಲುವನ್ನೂ ಕಾಣುವೆನೆಂಬ ಹರುಷ ಮತ್ತೊಂದು ಕಡೆ. ಎಷ್ಟು ಯೋಚಿಸಿದರೂ ಅವಳ ಸನ್ನಾಹವೇನೆಂಬುವುದನ್ನು ತಿಳಿಯಲಾಗಲಿಲ್ಲ. ಯೋಚಿಸಿದಂತೆಲ್ಲ ನನ್ನ ಬುದ್ಧಿ ಮಂದವಾಗತೊಡಗಿತೇ ಹೊರತು, ಪ್ರಶ್ನೆ ಬಗೆಹರಿಯುವಂತಿರಲಿಲ್ಲ. ತನ್ನ ಕಾರ್ಯದಲ್ಲಿ ಕಾಂತಂ ಪೂರ್ತಿ ಮಗ್ನಳಾಗಿರುವಳು. ಆದರೆ ಅತ್ತಿಗೆಯವರು ಮಾತ್ರ ಹಿಂಜರಿಯುತ್ತಿರುವರು. ಆ ಯೋಚನೆ ಎಂತಹದಾಗಿರಬಹುದು.

ಯೋಚಿಸುತ್ತ ಕುರ್ಚಿಯಲ್ಲಿ ಕುಳಿತಿದ್ದೇನೆ. ಆ ಯೋಚನೆಯಲ್ಲೇ ನಿದ್ರೆ ಬಂತು; ಮೈಮರೆತು ಮಲಗಿದೆ. ಹಿಂದಿನಿಂದ ಕಾಂತಂ ಬಂದು ಅನಿಲೀ

ಕ್ಷಿತವಾಗಿ ನನ್ನ ಕಣ್ಣುಮುಚ್ಚಿದಳು. ಬೆಚ್ಚಿಬಿದ್ದು ಎಚ್ಚರ ಹೊಂದಿ ಅವಳ ಕೈಗಳನ್ನು ತೆಗೆದೆ. ಅವಳು ನನ್ನೆದುರು ಬಂದು ನಿಂತಳು.

ಏನು ನಿನ್ನ ಈ ಹೊಸ ಯೋಜನೆ? ನೀನು ನಿನ್ನ ಅಕ್ಕ ಸೇರಿ ಏನೋ ಒಳಸಂಚು ನಡೆಸಿದಂತೆ ಕಾಣುತ್ತದೆ. ಏನದು ರಹಸ್ಯ?

ಸಾಕು ನಿಮ್ಮ ಮಾತು. ನಾವೇನೂ ಮಾಡುತ್ತಿಲ್ಲ. ಇರಲಿ, ನನಗೆ ಬಳೆ ಮಾಡಿಸುತ್ತೇನೆ ಎಂದು ಹೇಳಿ ಎಷ್ಟು ದಿನಗಳಾದವು. ಎಂದು.....?

ಮಾಡಿಸೋಣವಂತೆ. ಅದಕ್ಕೇನು?

ನಿಮ್ಮ ಮಾತು ಯಾವಾಗಲೂ ಹೀಗೆಯೇ. ನಾನು ಜೀವಂತ ಇರುವಾಗಲೇ ಈ........

ನೀನು ಹಾಗೆಂದರೆ ನನಗೆ ಕೋಪ ಬರುತ್ತೆ ನೋಡು ಕಾಂತಂ.

ಹಾಗಾದರೆ ಬೇಗ ಮಾಡಿಸಿಕೊಡಿ.

ಯಾವಾಗ ಆಗಬೇಕು?

ಇಂದೇ.

ಬಹಳ ಮೋಜಾಗಿದೆ ಈ ನಿನ್ನ ಹಟ.

ನೋಡ್ರೀ ಹಾಗಾದ್ರೆ. ನೀವು ಇಂದೇ ಅವುಗಳನ್ನು ಮಾಡಿಸದೇ ಹೋದ್ರೇ........

ನಾನು ಇಂದೇ ಮಾಡಿಸುವುದಿಲ್ಲವೆಂದರೆ ಮತ್ತೇನು ಮಾಡುವಿ. ಬಲವಂತದಿಂದಲಾದರೂ ಮಾಡಿಸುವೆಯಾ? ಇಲ್ಲವಾದರೆ ನನ್ನನ್ನು ಹೊಡೆದು ಬಡೆದು ಮಾಡಿಸುವಂತೆ ಮಾಡುವೆಯಾ?

ಹೊಡೆಯುವ ಮಾತೆಂದರೆ ನಮ್ಮ ಮದುವೆ ಸಮಯದಲ್ಲಿ ನಡೆದ ಮತ್ತೊಂದು ವಿಷಯ ನೆನಪಿಗೆ ಬರುತ್ತದೆ. ನಮ್ಮಿಬ್ಬರಿಗೆ ಬಹಳ ಸಣ್ಣವಯಸ್ಸಿನಲ್ಲೇ ಮದುವೆ ಆಯಿತು. ಮದುವೆಯ ದಿನಗಳಲ್ಲೊಂದು ದಿನ ನನಗೆ ಗಂಧವನ್ನು ಹಚ್ಚಬೇಕೆಂದು ಮದಲಗಿತ್ತಿ ಬಂದಳು. ಬೇಡವೆಂದೆ. ಎಲ್ಲರೂ ಬಲವಂತಪಡಿಸಿದರು. ಆಗಲೆಂದು ಮುಖವನ್ನೆತ್ತಿ ಹಿಡಿದೆ. ಗಲ್ಲಗಳಿಗೆ ಗಂಧ

ತ್ಯಾಗವಲ್ಲವೆಂದು ನಿರ್ಧರಿಸಿದೆ. ಮನಸ್ಸು ಪರಿವರ್ತನಗೊಂಡಿತು. ಹೇಮ ಕಂಕಣದ ಶೋಭಿತವಾದ ಆ ಕೈಗಳನ್ನು ಒಡಿದು ಮುದ್ದಿಡಲು ಯತ್ನಿಸಿದೆ. ಆದರೆ ಆ ಹೊಸ ಒಡವೆಗಳ ಹರಿತವಾದ ಕೊನೆಗಳ ತಾಕಲಿಕೆಯಿಂದ ನನ್ನ ತುಟಿಗಳಿಗೆ ಕೊಂಚ ನೋವಾಯಿತು. ನಗುತ್ತ ಅವಳ ಕೈಯನ್ನು ಬಿಟ್ಟೆ. ಗೆದ್ದೆನೆಂಬ ಜಂಭದಿಂದ, ಒಯ್ಯಾರದಿಂದ ಓಡಿ ಹೋದ ನನ್ನ ಕಾಂತಳ ಆಗಿನ ಭಂಗಿ ಬಲು ಮನಮೋಹಕವಾಗಿತ್ತು.



# ಸೀರಿ ಸೀರೆ

## (೧)

ಕಾಂತಂ, ನಾಳೆ ಅಲ್ಲವೆ ಸುಬ್ಬು ಬರುವುದು?

ಯಾವ ಸುಬ್ಬು?

ನನ್ನ ಸೋದರ ಅತ್ತೆಯ ಮಗಳು.

ಏತಕ್ಕೋಸ್ಕರ?

— ಅದೇನು ಹಾಗೆ ಕೇಳುವಿ? ಮೊನ್ನೆ ನಿನ್ನ ಅಕ್ಕ ಏತಕ್ಕೆ ಬಂದಿದ್ದಳು?

— ನನ್ನನ್ನು ನೋಡುವುದಕ್ಕೆ.

— ಇದೂ ಅದರಂತೆ.

— ಯಾರನ್ನು ನೋಡುವುದಕ್ಕೆ?

— ನಿನ್ನನ್ನೇ, ಕಾಂತಂ.

— ನೀವಿರೋವಾಗ ನನ್ನನ್ನೇತಕ್ಕೆ ನೋಡಲು ಬರುತ್ತಾಳೆ?

ಸುಬ್ಬುವನ್ನು ನೋಡಲು ನಾನು ಬಹಳ ದಿನಗಳಿಂದ ಕಾತುರನಾಗಿದ್ದೆ. ನೋಡದೆ ಬಹಳ ದಿನಗಳಾಗಿದ್ದುವು. ಮಾರನೆಯ ದಿನ ಮುಂಜಾನೆ ನಾಲ್ಕು ಗಂಟೆಗೆಲ್ಲಾ ನಮ್ಮ ಮನೆಯ ಮುಂದೆ ಕುದುರೆ ಗಾಡಿ ಬಂದು ನಿಂತಿತು. ಅದರೊಳಗಿಂದ ಸುಬ್ಬು ಬಂದಿದ್ದಳು. ಕಾಂತಂ ಅವಳನ್ನು ಎದುರುಗೊಂಡು ಸಂತೋಷದಿಂದ ಬರಮಾಡಿಕೊಂಡಳು. ಅವಳನ್ನು ಮೊದಲು ನಗುಮುಖದಿಂದ ಮರ್ಯಾದೆಯಿಂದ ಮಾತನಾಡಿಸಿದವಳು ಕಾಂತಂ. ಅವಳ ಈ ವರ್ತನೆಯನ್ನು ಕಂಡು ನಾನು ಮೆಚ್ಚಿದ್ದೆ. ಬೆಳೆದು ನಿಂತ ಸುಬ್ಬು ಇಷ್ಟು ಚೆಲುವೆಯಾಗುವಳೆಂದು ನಾನು ಎಣಿಸಿರಲಿಲ್ಲ. ಹಳ್ಳಿಯಲ್ಲಿ ಬೆಳೆದ ಇವಳ ಮುಖದ ಮೇಲೆ ಮೊದ್ದು ಮೊದ್ದಿನ ಛಾಯೆ ಇರಲಿಲ್ಲ. ಕಾಂತಿವಿಹೀನವಾಗಿ

ರಲಿಲ್ಲ ಅವಳ ಮುಖ-ಕಣ್ಣುಗಳು ಜ್ಯೋತಿರ್ಮಯವಾಗಿದ್ದವು. ಎತ್ತರವಾದ ಮೈಕಟ್ಟು; ಎದ್ದು ನಿಂತ ಕುಚದ್ವಯ ಅವಳ ದೇಹಕ್ಕೆ ನವೀನ ಕಾಂತಿಯು ನ್ನುಂಟು ಮಾಡಿದ್ದವು. ತೆಳುವಾದ ಅವಳ ನಡುಕಟ್ಟು ಸುಂದರವಾಗಿ ಕಾಣು ತ್ತಿತ್ತು. ಹಣೆಯಲ್ಲಿ ಧರಿಸಿದ್ದ ಢಾಳಾದ ಕುಂಕುಮ ದುಂಡಾದ ಆ ಮುಖಕ್ಕೆ ಹೆಚ್ಚಿನ ಶೋಭೆಯನ್ನುಂಟುಮಾಡಿತ್ತು.

ಆದೇತಾನೆ ಮೂಡಿಬರುವ ಸೂರ್ಯನ ಆಗಮನ, ಆ ಹೊಸಬೆಳಕು ಅವಳಲ್ಲಿ ನ್ಯೂನತೆಯನ್ನುಂಟುಮಾಡಿದ್ದವು.

ಅವಳ ಆ ದಿವ್ಯ ಮೋಹಕ ರೂಪವನ್ನು ಕಂಡು ಮುಗ್ಧನಾಗಿ ನಿಂತುಬಿಟ್ಟೆ. ಮಾತುಗಳು ಹೊರಡದಂತಾದವು. ಅವಳ ಸೌಂದರ್ಯ ನನ್ನನ್ನು ಮರುಳು ಗೊಳಿಸಿತ್ತು. ಆದೇ ಚೆಲುವು ಒಲವಿನವಸ್ತುವಾಗಿ ವಶೀಕರಣಶಕ್ತಿಯುಳ್ಳದ್ದೆಂಬ ಅರಿವು ಅಂದು ನನಗೆ ಉಂಟಾಯಿತು. ಸೌಂದರ್ಯವೆಂಬ ಆ ರಥಕ್ಕೆ ಸರ ಪಳಿಗಳಿಂದ ನಾನು ಬಂಧಿತನಾದೆ. ಆ ಸೌಂದರ್ಯವನ್ನು ನಾನು ಆಸ್ವಾದಿಸಿ ದಂತೆಲ್ಲ ಹಸಿವು ಹೆಚ್ಚಿತು; ಬಾಯಾರಿಕೆ ಕಡಿಮೆಯಾಗಲಿಲ್ಲ.

ಮುಂದೆ ಕಾಂತಂ–ಸುಬ್ಬು ಇಬ್ಬರೂ ಪರಸ್ಪರ ಸಹಾಯದಿಂದ ಅಡಿಗೆ ಮನೆಯ ಕೆಲಸದಲ್ಲಿ ಮಗ್ನರಾದರು. ಸಕಾಲಕ್ಕೆ ಸುಬ್ಬಮ್ಮ "ಮಾವಾ, ಅಡುಗೆ ಸಿದ್ಧವಾಗಿದೆ. ಅಕ್ಕ ಸ್ನಾನಮಾಡಬೇಕೆಂದು ಹೇಳುತ್ತಾಳೆ" ಎಂಬ ಕೋಗಿಲೆಯಂತಹ ಮೃದು ಮಧುರ ಸ್ವರ, ಆ ಕರೆ ನನ್ನ ಹೃದಯವನ್ನು ಕಲಕಿತು. ಹೃದಯ ವೀಣೆ ಮಿಡಿಯಿತು; ನುಡಿಯಿತು. ನಿಶ್ಚೇಷ್ಟಿತ ನಾಗಿ ಸುಖಸ್ವಪ್ನಾವಸ್ಥೆಯಲ್ಲಿದ್ದ ನನ್ನನ್ನು ಅವಳು ಎಚ್ಚರಿಸಿದಂತಾಯಿತು.

— ಸ್ನಾನಕ್ಕೆ ಏಳಬೇಕಂತೆ, ಮಾವಾ!

— ಆಗಲಿ, ನಿಮ್ಮ ಅಮ್ಮನಿಗೆ ಉಬ್ಬಸ ಹೇಗಿದೆ?

— ಏನೂ ಗುಣವಿಲ್ಲ. ತೊಂದರೆಯಾಗಿಯೇ ಇದೆ. ಬೇಸಿಗೆಯಲ್ಲಿ ನಾಲ್ಕು ತಿಂಗಳು ಸ್ವಲ್ಪ ಗುಣಮುಖ, ಮಳೆಗಾಲದಲ್ಲಿ ಆವಳ ವ್ಯಥೆ ನೋಡಲು ಬಹು ಕಷ್ಟ. ಪಾಪ?

ನಾನು ಮಾತನಾಡಲಿಲ್ಲ. ಸುಬ್ಬು ಮಾತನಾಡಲು ಹವಣಿಸುವುದನ್ನು ಕಂಡೆ.

— ನಮ್ಮಂಥವರು ಮನೆಗೆ ಬಂದರೆ ಮಾವನವರಿಗೆ ದಿಗಿಲು, ಎಂದು ಹಳ್ಳಿಯ ಹಾಸ್ಯದ ರೀತಿಯಲ್ಲಿ ನುಡಿದಳು.

ನಾನು ಸುಮ್ಮನಿದ್ದು ಆ ಮಾತಿನ ಶ್ರವಣಸುಖವನ್ನು ಪಡೆಯುತ್ತಿದ್ದೆ.

ನಿಜವಾಗಿಯೂ ನಾನು ಅಂದು ಊಟ ಮಾಡಲೇ ಇಲ್ಲ. ಅವಳ ಊಟ ಮುಗಿಸದರ ಮೂಲಕ ನಾನು ಮಜ್ಜಿಗೆ ಹಾಕಿಸಿಕೊಂಡು ಎದ್ದು ಬಿಟ್ಟೆ. ಕಾಂತಂ ಬೇಗ ಊಟ ಮುಗಿಸಿ ನಮ್ಮನ್ನು ಸೇರಿದಳು. ಮೂರು ಮಂದಿ ಚಾಪೆಯ ಮೇಲೆ ಹರಟೆ ಹೊಡೆಯುತ್ತ ಕುಳಿತಿದ್ದೆವು. ಸುಬ್ಬಮ್ಮ ನಾನೂ ಕೊಟ್ಟಬೀಡಾ ಸೇವಿಸಿದೆವು. ಕಾಂತಂಳನ್ನೇ ಬೀಡಾ ಮಾಡಿಕೊಡೆಂದು ಏಕೆ ಕೇಳಲಿಲ್ಲವೆಂಬ ಸಂಶಯ ಅವಳ ಮುಖದಲ್ಲಿ ಮೂಡಿತ್ತು. ಅವಳಲ್ಲಿ ಅಸೂಯೆ ತಲೆದೋರಿತು. ನಾನು ಆ ಚಲುವೆಯನ್ನು ನೋಡಿದಂತೆಲ್ಲ ಅವಳ ಹೃದಯ ಕೋಪದಿಂದ ಪ್ರಜ್ವಲಿಸುತ್ತಲಿತ್ತು. ಸುಬ್ಬಮ್ಮ ಬೀಡಾ ಕೊಡುವಾಗ ಅವಳ ಕಿರುಬೆರಳು ನನ್ನ ಬೆರಳಿಗೆ ತಾಕಿತು. ಅದನ್ನು ನೋಡಿದ ಕಾಂತಂಳ ಹೃದಯದಲ್ಲಿ ಆದ ವಿಕಾರದ ಮಾತಂತಿರಲಿ. ನನ್ನ ದೇಹ ಬೆವರಿಟ್ಟಿತು; ನನ್ನೆದೆ ಝಲ್ಲೆಂದಿತು. ಮುಗುದೆಯಾದ ಸುಬ್ಬುಗೆ ಇದು ತಿಳಿದಿರಲಿಲ್ಲ. ಆದರೆ ಕಾಂತಂ ಈ ವರ್ತನೆಯನ್ನು ಕಂಡು ಸಹಿಸಲಾರದೆ ರಭಸದಿಂದೆದ್ದು ತನ್ನ ಕೋಣೆಯೊಳಗೆ ಹೋಗಿ ಮಲಗಿದಳು.

(೨)

ಕೋಣೆಯಲ್ಲಿ ಮಲಗಿ ಬಿಕ್ಕಿ ಬಿಕ್ಕಿ ಅಳುತ್ತಲಿದ್ದ ಕಾಂತಂಳ ಕೋಪಾಗ್ನಿಯನ್ನು ಹೇಗೆ ಶಮನಗೊಳಿಸುವುದೆಂದು ಯೋಚಿಸತೊಡಗಿದೆ. ಅವಳ ಶರೀರ ಗಾಳಿಗೆ ಎಲೆಬಳ್ಳಿ ಅಲುಗಾಡುವಂತಿತ್ತು. ಅವಳ ಹೃದಯದಲ್ಲಿ ಏನೇನೋ ಭಾವನೆಗಳು ತಲೆದೋರಿದವು. ಅವಳಲ್ಲುಂಟಾದ ಈ ಮನೋವೇದನೆಯನ್ನು ಕುರಿತು ನಾನು ಯೋಚಿಸಿದೆ. ನಾದಿನಿಯೊಂದಿಗೆ ನಾನು ಸಲುಗೆಯೊಂದಿಗೆ ಮಾತನಾಡಿದರೆ ಇವಳಿಗೇಕೆ ಈ ಬಗೆಯ ಜಿಗುಪ್ಸೆ? ಅವಳ ಈ ವೇದನೆ

ಯನ್ನು ನೋಡಲಾರದೆ ಹೊರಗಾದರೂ ಹೋಗೋಣವೆಂದು ಅಂಗಿಗಳನ್ನು ಧರಿಸಿ ಅವಳ ಕೋಣೆಗೆ ಹೋದೆ. ಅವಳು ದುಃಖ ಸಮುದ್ರದಲ್ಲಿ ಲೀನವಾಗಿದ್ದಳು. ನನ್ನ ಕಡೆ ನೋಡಲಿಲ್ಲ. ಅವಳನ್ನು ಸಮೀಪಿಸಿ "ಕಾಂತಂ. ಇದೇನು ಹುಡುಗಿಯಂತೆ ಅಳುತ್ತಿರುವೆ? ಏನೂ ಅರಿಯದ ಆ ಮಗುವಿಗೆ ಏನೆಂದು ಭಾವಿಸಬೇಕು?" ಎಂದು ಹೇಳಿದೆ. ಅವಳು ತನ್ನ ಗಲ್ಲದ ಮೇಲಿನ ನನ್ನ ಕೈಗಳನ್ನು ಕೊಸರಿ ಕೃಷ್ಣನಿಗೆ ಸತ್ಯಭಾಮೆಯಿಂದ ಆದಂತ ಸನ್ಮಾನವೆ ಆಯಿತು. ಆದರೂ ಸಹನೆಯಿಂದ ಅವಳನ್ನು ಸಂತೈಸಲು "ಇದೇನೇ ಹುಚ್ಚು ಕೆಲಸ?" ಎಂದು ಕೇಳಿದೆ.

— ಯಾರದು?

— "ಅಲ್ಲ ನನ್ನದು, ಇಷ್ಟೇಕೆ ಬೇಜಾರ?"

— ವಿಚಾರವಲ್ಲವೆ ಮತ್ತೇನು? ನಾನೂ ಸ್ವರವನ್ನು ಹಿಡಿದಾಗಿದ್ದದೆ.

— ಅದರಿಂದ ಆದ ಕೋಪವಾದರೂ ಏನು?

— ಏನೂ ಇಲ್ಲ. ನನಗಿಂತಲೂ ಸುಂದರ ರೂಪಿಗಳು ಮನೆಗೆ ಬಂದರೆ ನನ್ನ ಮೇಲಿನ........

—ಛೀ! ಹುಚ್ಚೀ. ಇದೇ ಏನೆ ನಿನ್ನ ಕೋಪಕ್ಕೆ ಕಾರಣ? ಸುಬ್ಬಮ್ಮನ ಕಡೆ ನಾನು ಬಹು ಆದರದಿಂದ ನೋಡಿದೆನೆಂದಲ್ಲವೆ ನಿನಗೆ ಕೋಪ? ಅಬ್ಬಾ, ಅವಳನ್ನು ನೋಡಿದ ಮಾತ್ರಕ್ಕೇನಾಯಿತೂ ಅಂದೆ?

— ತಪ್ಪಿಲ್ಲವೆ ಸ್ವಾಮಿ? ನೋಡಿದರೂ ತಪ್ಪಿಲ್ಲ: ಕೊಟ್ಟ ವೀಳೆಯದೆಲೆ ಹಾಕಿಕೊಂಡರೂ ತಪ್ಪಿಲ್ಲ: ಮುಟ್ಟಿ ಕೈಗೆ.... ...ತಪ್ಪಿಲ್ಲ........ಎಂದು ಹೇಳುತ್ತ ಮಾತು ನಿಲ್ಲಿಸಿ ಮತ್ತೆ ಅತ್ತುಬಿಟ್ಟಳು.

— ಇರಲಿ ಬಿಡು ಕಾಂತಂ. ನೀನು ಸುಮ್ಮನಾಗು. ನಿನ್ನ ಈ ಅವಿಚಾರದ ವರ್ತನೆಗೆ ಏನನ್ನಬೇಕು? ಸುಬ್ಬು ಬಹು ಸುಂದರಿ. ಅವಳ ಲಾವಣ್ಯವನ್ನು ಕಂಡು ಆನಂದಿಸಿದರೆ ತಪ್ಪೆ? ನಾನು ಯಾರನ್ನೂ ನೋಡಲೇಬೇಡವೆ? ದಿನವೂ ನಾನೆಷ್ಟೋ ಸುಂದರ ವಸ್ತುಗಳನ್ನು ನೋಡುತ್ತೇನೆ. ಆದರ

ಮೂಲಕ ದರ್ಶನ ಸುಖವನ್ನು ಪಡೆಯುತ್ತೇನೆ. ಅದರಲ್ಲಿಯೂ ತಪ್ಪೇನು? ಗುಲಾಬಿ ಹೂವನ್ನು ನೋಡಿ ಆನಂದಿಸಿ, ಸುಖ ಪಡುವುದಿಲ್ಲವೇ? ಅದನ್ನು ಕಂಡರೆ ಆದಂತಹ ಆನಂದ ಸುಬ್ಬಮ್ಮನನ್ನು ಕಂಡರೆ ಆಯಿತು. ಇದರಲ್ಲಿ ನನ್ನದೇನೂ ದೋಷವಿಲ್ಲ. ನನಗಾವ ಪಾಪ ಕೆಲಸ ಮಾಡಬೇಕೆಂಬ ಮರ ಭಿಲಾಷೆ ಇರಲಿಲ್ಲ ಎಂದು ದೊಡ್ಡ ಲೆಕ್ಚರ್ ಹೊಡೆದೆ.

ಕಾಂತಂ ಕೊಂಚ ಸಿಡಿಸಿಡಿ - ಇರಲಿ, ಈ ನಿಮ್ಮ ತತ್ವಜ್ಞಾನ ಹೆಣ್ಣಿಗೂ ಅನ್ವಯಿಸುತ್ತದೇನು? ಓರ್ವ ಸ್ತ್ರೀ ಮತ್ತೋರ್ವ ಸುಂದರ ಪುರುಷನನ್ನು ಕಂಡು ಅವನೊಂದಿಗೆ ಸರಸವಾಡಬಹುದೆ? ಎಂದು ಕೇಳಿದಳು.

— ನಿಸ್ಸಂಶಯವಾಗಿ. ಅದರಲ್ಲಿ ಯಾವ ತಪ್ಪೂ ಇಲ್ಲ. ಮಾತನಾಡಿದರೇನು ತಪ್ಪು? ನಿಸರ್ಗದಲ್ಲಿಯ ಸುಂದರ ವಸ್ತುವನ್ನು ಕಂಡು ಆನಂದಿಸುವ ಹಕ್ಕು ಎಲ್ಲರಿಗೂ ಉಂಟು.

— ಸಾಕು ಬಿಡ್ರಿ ನಿಮ್ಮ ವೇದಾಂತ.

ಅಲ್ಲಿಗೆ ಮಾತು ನಿಲ್ಲಿಸಿ ನಾನು ಅಡ್ಡಾಡಲು ಹೊರಟುಹೋದೆ.

( ೨ )

ಕಾಂತಂ ನಿರಾಸೆಯ ಮನದಿಂದ ಎಂದಿನಂತೆ ಮನೆಯ ಕೆಲಸ ಮಾಡ ತೊಡಗಿದಳು. ಹೆಣ್ಣುಮಕ್ಕಳ ಕೋಪ ಶಮನವಾಗಬೇಕಾದರೆ, ಅವರಿಗೇನಾದರೂ ಬೇಕಾದ ವಸ್ತುವನ್ನು ಕೊಂಡುಕೊಡುವುದೇ. ಅವಳಿಗೆ ಹೊಸ ಸೀರೆ ತರಬೇಕೆಂದು ಪೇಟೆಗೆ ಹೊರಟೆ. ಎಲ್ಲವನ್ನೂ ವಿಚಾರಿಸಿ ಸುಂದರವಾದ ನೀಲಿಬಣ್ಣದ ಸೀರೆ ಬೆಲೆ ಮಾಡಿ ತಂದೆ. ಅದೊಂದು ಬಹು ಚೆನ್ನಾದ ಸೀರೆ. ಅವಳಿಗೆ ಆ ಸೀರೆಯನ್ನು ತೋರಿಸಬೇಕೆಂಬ ಆತುರದಿಂದ ಬೇಗ ಬೇಗ ಹೆಜ್ಜೆ ಹಾಕಿದೆ. ಹಾದಿಯಲ್ಲಿ ಒಬ್ಬ ಮುದುಕಿ, ಮತ್ತೊಬ್ಬ ಯುವತಿ ನನ್ನ ನಡೆಯನ್ನು ತಡೆದು "ಈ ಸೀರೆಯ ಬೆಲೆ ಏನು?" ಎಂದು ಕೇಳಿದರು. ಹತ್ತು ರೂಪಾಯಿಯೆಂದು ಹೇಳಿದ ಕೂಡಲೇ ಇರಬಹುದೆಂದು ಆ ವಯಸ್ಸಾದವಳು ನುಡಿದಳು. ಮನೆಯನ್ನು ಬೇಗ ಸೇರಬೇಕೆಂಬ ಲವಲವಿಕೆಯಿಂದ ದಾರಿ ನಡೆದೆ. ಹಾದಿಯಲ್ಲಿ ಮತ್ತೆ ಇಬ್ಬರು ಯುವತಿಯರು ಅದನ್ನು ನೋಡಿ

ಆನಂದಿಸಿದರು. ಅಂತೂ ಜನರ ಕಾಟ ತಪ್ಪಿಸಿಕೊಂಡು ಮನೆ ಸೇರಿದ ಕೂಡಲೇ ನನ್ನ ಕೈಯಲ್ಲಿದ್ದ ಆ ಸೀರೆಯನ್ನು ಬಹು ವಿಶ್ವಾಸದಿಂದ ತೆಗೆದುಕೊಂಡು ಸೀರೆ ಚನ್ನಾಗಿದೆಯೆಂದು ಹೊಗಳಿದರು. ಆಗಲೇ ಉಡಬೇಕೆಂದು ನಾನು ಕಾಡಿದೆ. ಅವಳು ಊಟವಾದ ನಂತರ ಉಡುವೆನೆಂದು ಹೇಳಿದ ಸಬೂಬು ನನಗೆ ಸರಿ ಕಾಣಲಿಲ್ಲ. ಇಲ್ಲವೆಂದೆ. ಜಡೆ ಹಾಕಿಕೊಂಡು ಹೂ ಮುಡಿದು ಸೀರೆ ಧರಿಸಿದಳು. ನನಗೆ ನಮಸ್ಕಾರ ಮಾಡಿದಳು. ಅವಳನ್ನು ಮೇಲಕ್ಕೆತ್ತಿ, ಮುಖವನ್ನು ಕೈಯಿಂದ ಹಿಡಿದು ಮನಸಾರ ಮುದ್ದಿಸಿದೆ. ಆರಂಭವಾದ ಪ್ರಣಯ ಕಲಹವು ಈ ವಿಧವಾಗಿ ರಾಜಿಯಾಗಿ ಮುಗಿಯಿತು.

(೫)

ಆ ಸೀರೆಯೆಂದರೆ ಕಾಂತಂಳಿಗೆ ಬಹು ಪ್ರೀತಿ. ಅವಳಿಗೆ ಆ ಸೀರೆ ಉಡಬೇಕೆಂದರೆ ಬಹು ಉತ್ಸಾಹ. ಹಗಲೆಲ್ಲ ಕೆಲಸದ ಸಮಯದಲ್ಲಿ ಯಾವ ಸೀರೆಯನ್ನುಟ್ಟಿದ್ದರೂ, ಸಂಜೆ ಹೂ ಮುಡಿದು ಆ ಸೀರೆಯನ್ನೇ ಉಡುತ್ತಿದ್ದಳು. ಆ ಸೀರೆ ಧರಿಸಿದ ಕಾಂತಂಳನ್ನು ಕಂಡರೆ ನನಗೂ ಬಹು ಪ್ರೀತಿ.

ಒಂದು ದಿನ ಕಾಂತಂಳ ಅಕ್ಕ ಊರಿಗೆ ಬಂದಳು. ವಯಸ್ಸಿನಲ್ಲಿ ಇವರಿಬ್ಬರಿಗೂ ಹೆಚ್ಚು ವ್ಯತ್ಯಾಸವಿರಲಿಲ್ಲ. ಇವರಿಬ್ಬರದೂ ಒಂದೇ ಛಾಯೆ; ಒಂದೇ ರೀತಿಯ ಮುಖ ಲಕ್ಷಣ; ಅವಳಿ ಮಕ್ಕಳಂತೆ ಇದ್ದರೆಂದರೆ ತಪ್ಪಿಲ್ಲ. ದೂರದಿಂದ ಇಬ್ಬರನ್ನೂ ಪ್ರತ್ಯೇಕವಾಗಿ ಗುರುತಿಸುವುದು ಕಷ್ಟದ ಮಾತೇ ಸರಿ.

ಅಂದು ಕ್ಲಬ್ಬಿನಲ್ಲಿ ಸಭೆ ಇದ್ದುದರಿಂದ ನಾನು ಕೊಂಚ ತಡವಾಗಿ ಮನೆಗೆ ಬಂದೆ, ದಿನವೂ ಹೆಬ್ಬಾಗಿಲು ತೆರೆದಿರುತ್ತಿತ್ತು. ಕಾಂತಂ ದೀಪವನ್ನಿಟ್ಟುಕೊಂಡು ಪಡಸಾಲೆಯಲ್ಲಿ ಕುಳಿತಿರುವುದು ವಾಡಿಕೆ. ಬಾಗಿಲು ಹಾಕಿತ್ತು. ಬಾಗಿಲು ಹತ್ತಿರ ನಿಂತಾಗ ಒಳಗೆ ಏನೋ ವಿನೋದದ ಪ್ರಸಂಗ ನಡೆದು ನಗುವು ಕೇಳಿಬರುತ್ತಿತ್ತು. ಅದೇನೆಂದು ತಿಳಿಯಲು ಹಿತ್ತಲ ಬಾಗಿನಿಂದ ಮನೆಯನ್ನು ಪ್ರವೇಶಿಸೋಣ ಎಂದು ನಿರ್ಧರಿಸಿ ಆ ಬಾಗಿಲನ್ನು ಸಮೀಪಿಸುತ್ತಿರುವಾಗ ನನ್ನ ಮಲಗುವ ಕೋಣೆಯಲ್ಲಿ ದೀಪವು ಸಣ್ಣಗೆ ಉರಿಯುತ್ತಿರುವುದನ್ನು ಕಂಡೆ. ಕಾಂತಂ ಆ ನೀಲಿ ಸೀರೆಯನ್ನುಟ್ಟು ಗೋಡೆಗೆ ಆತುಕೊಂಡು ನಿಂತಿದ್ದಳು. ಅವಳೆದು

ರೊಬ್ಬ ಪುರುಷನು ನಿಂತಿದ್ದನು. ಅವನು ಹೊಸ್ತಿಲ ಬಳಿ ನಿಂತು ಅವಳೊಂದಿಗೆ ಏನೇನೋ ಮಾತನಾಡುತ್ತಾ ನಿಂತಿದ್ದನು. ಅವನ ಮಾತಿಗೆ ಸಮ್ಮತಿಯನ್ನು ಸೂಚಿಸುತ್ತ ಕಾಂತಂ ತಲೆ ಆಡಿಸುವುದನ್ನು ಕಂಡೆ; ಮುಂದೆ ಅವನು ಅವಳ ಕೈಯಲ್ಲಿಯ ಉಂಗುರವನ್ನು ಹಿಡಿದು ನೋಡುತ್ತಿರುವಾಗ "ಕಾಂತಂ, ಬಾಗಿಲು ಬಾಗಿಲು" ಎಂದು ಒದರಿದೆ.

ಕಾಂತಂ ಬಂದು ಬಾಗಿಲು ತೆಗೆದಳು. ತನ್ನ ಗುಟ್ಟು ಹೊರಬಿಟ್ಟಿತಲ್ಲ ವೆಂಬ ಸಂದೇಹದಿಂದ ಹಿತ್ತಲಿಗೆ ಓಡಿದಳು. ಅವಳ ಪ್ರೈರಿ ತಪ್ಪು ಮಾಡಿದವ ಳಂತೆ ಕಂಡುಬಂತು. ಅವಳ ನಿರ್ಮಲ ವರ್ತನೆಯ ಬಗ್ಗೆ ಅನೇಕ ಸಲ ಸಾಕ್ಷ್ಯಗಳನ್ನು ಕಂಡ ನನಗೆ ಆಶ್ಚರ್ಯವೆನಿಸಿತು. ಅವಳು ಈ ನೀಚ ವರ್ತನೆಗೇಕೆ ಕೈಹಾಕಿದಳೆಂದು ಯೋಚಿಸಿದೆ. ಎಂದಿನಂತೆ ಅವಳಲ್ಲಿ ತೋರುತ್ತಿದ್ದ ನಗುವಿನ ಆಹ್ವಾನವಿರಲಿಲ್ಲ. ಸರಸದ ಮಾತಂತೂ ಇಲ್ಲವೇ ಇಲ್ಲ. ತನ್ನ ತಪ್ಪು ಹೊರ ಬಿತ್ತಲ್ಲ ಎಂದು ಸಂತಾಪದಲ್ಲಿದ್ದ ಅವಳನ್ನು ವಿಚಾರಿಸುವುದಕ್ಕಿಂತ ಆ ಅಂಗತು ಕನಾರೆಂದು ವಿಚಾರಿಸಿಕೊಳ್ಳುವುದು ಒಳ್ಳೆಧೆಂದು ಭಾವಿಸಿ ಅತ್ತಿಗೆಯವರನ್ನು ಕೂಗಿದೆ.

— ಕಾಂತಂ ಎಲ್ಲಿ ?

— ಹಿತ್ತಲದಲ್ಲಿರುವಳು. ಎಂದು ಅವರಿತ್ತ ಪ್ರತ್ಯುತ್ತರ ನನ್ನ ಕೋಪಾಗ್ನಿಯನ್ನು ಹೆಚ್ಚಿಸಿತು. ಆ ಉಂಗುರದ ಪ್ರಸಂಗ ನೆನಪಾದಂತೆ ನನ್ನ ಕೋಪ ಹೆಚ್ಚಿತು. ಅದೇ ಕೋಪದ ಭರದಿಂದ ಕೋಣೆಯನ್ನು ನುಗ್ಗಿದೆ. ಗೋಡೆಯ ಕಡೆ ಮುಖ ತಿರುವಿ ಕುಳಿತ ಆ ಪುರುಷನನ್ನು ಕಂಡು ನಾನು ಮತ್ತಿಷ್ಟು ಕುಪಿತನಾಗಿ ಅವನನ್ನು ಕೇಳಿದೆ ನೀನಾರೆಂದು.

— ನಿರುತ್ತರ.

— ನೀನಾರು ? ಮಾತನಾಡಬಾರದೆ ?

ಮೌನ ನನ್ನ ಕೋಪದ ಅಳತೆ ಮೀರಿತು. "ಅಲ್ರೀ ಮಹಾಶಯ ನನ್ನ ಕೋಣೆಯಲ್ಲಿ ಕುಳಿತು, ಸೊಕ್ಕಿನಿಂದ ಸುಮ್ಮನಿರುವಿರಾ " ಎಂದು

ಅವನ ತಲೆಗೆ ಕ್ಕೈ ಹಾಕಿದೆ. ಅವಸರದಲ್ಲಿ ಜೋಲಿ ತಪ್ಪಿ ನಾನವನ ಮೇಲೆ ಬಿದ್ದೆ. ಅದರಿಂದ ಅವನ ತಲೆ ಮೇಲಿನ ರುಮಾಲು ಕೆಳಗೆ ಬಿತ್ತು.

ಪುರುಷವೇಷದಲ್ಲಿದ್ದುದು ಸ್ತ್ರೀಯೆಂದು ತಿಳಿದು ದಿಗ್ಭ್ರಾಂತನಾಗಿ ಮಂಕ ನಂತೆ ನಿಂತುಬಿಟ್ಟೆ. ಉಕ್ಕಿಬರುತ್ತಿದ್ದ ನಗುವನ್ನು ತಡೆಯಲಾರದೆ ಆ ಹೆಣ್ಣು ಬಿದ್ದು ಬಿದ್ದು ನಗುತ್ತ ಹೊರಗೆ ಓಡಿಹೋದಳು.

ಒತ್ತಲ್ಲೇ ಕಾಂತಂ, "ಎಲ್ಲಿಗೆ ಓಡಿಹೋಗುವಿ? ಇಲ್ಲಿ ಕುಳಿತುಕೋ" ಎಂದು ನಡುಮನೆಯಲ್ಲಿ ಮಂಚದ ಮೇಲೆ ಅವಳನ್ನು ಸಮಾಧಾನ ಮಾಡುವ ವಿಧಾನ ಕೇಳಬಂತು.

— ಏನು ನಡೆಯಿತೇ? ಹೀಗೇಕೆ ಭಯ?

— ಅಬ್ಬ, ಎಂದು ನಕ್ಕುಬಿಟ್ಟಳು.

— ಇರಲಿ ಬಿಡೆ. ಏನಾಯಿತು ಹೇಳು.

— ಅಬ್ಬ. ಅವರು ನನ್ನನ್ನು ಹೊಡೆಯುವುದರಲ್ಲಿದ್ದರು. ಪುಣ್ಯ ಆ ಪ್ರಸಂಗ ತಪ್ಪಿತು.

— ಇನ್ನೇಕೆ ನಗುವೆ. ಹೊಡೆದರು? ನೀನೇನು ಮಾಡಿದೆ?

— ಅಲ್ಲಾ. ನನ್ನನ್ನು ಹೊಡೆಯಲು ಹೋಗಿ ಅವರೇ ಪೆಟ್ಟುತಿಂದರು.

— ಸಾಕು ಬಿಡೆ. ನಿನ್ನ ಕುಚೇಷ್ಟೆ ನಗು ನಿಲ್ಲಿಸು.

ಈ ಸಂಭಾಷಣೆ ಕೇಳಿ ನನಗೆ ಮತ್ತಿಷ್ಟು ಸಂತೋಷವಾಯಿತು. ಅವರ ಆ ನಗು ನನ್ನನ್ನು ಹುಣ್ಣು ಮಾಡಿತ್ತು. ಆದರೆ ಅವರ ಆ ತಿಳಿ ನಗು ಗಾಳಿಯಲ್ಲಿ ಬೆರೆತು ಮಾಯವಾಗುತ್ತಿತ್ತು. ನನ್ನ ಹುಚ್ಚಾದ ಆ ಅವಸ್ಥೆಯಲ್ಲಿಯೂ ಅವರ ಈ ಸ್ವಾರಸ್ಯವಾದ ಹಾಸ್ಯನಾಟಕ ನನ್ನನ್ನು ನಗುವಂತೆ ಮಾಡಿತು. ಮಂಚದ ಮೇಲೆ ಕುಳಿತಲ್ಲಿಯೇ ನಕ್ಕುಬಿಟ್ಟೆ.

— ಅವರನ್ನು ಬಾಟಿಕ್ಕೆಬ್ಬಿಸು ಕಾಂತೇ.

— ನಾ ಒಲ್ಲೆನಪ್ಪಾ. ನೀನೇ ಕರೆ.

— ನನಗೂ ಮಾತು ಬಾರದಂತಿದೆ. ನೀನೇ ಹೋಗು. ನನಗೆ ಒಡಿಯಲಾರದ ನಗು ಬರುತ್ತಿದೆ. ಹೋಗು.

— ಹೂ. ಹೂಂ. ನಾನು ಹೋಗುವುದಿಲ್ಲ.

ನಿರ್ವಾಹವಿಲ್ಲದೆ ಅತ್ತಿಗೆಯವರೇ ನನ್ನನ್ನೂ ಊಟಕ್ಕೆಬ್ಬಿಸಿದರು. ಊಟವಾದನಂತರ ಕಾಂತಂ ವೀಳೆಯದೆಲೆಯನ್ನು ಮಡಿಚಿಕೊಡುತ್ತ ಬಿದ್ದು ಬಿದ್ದು ನಗತೊಡಗಿದಳು.

— ಇರಲಿ ಕಾಂತಂ. ನೀನು ಗಂಡುವೇಷ ಹಾಕಿದೆ. ಆ ನೀಲಿ ಸೀರೆ ಉಟ್ಟವಳು ನಿಮ್ಮ ಅಕ್ಕನೇನು? ಎಂದು ಕೊಂಚ ಹಾಸ್ಯದ ರೀತಿಯಲ್ಲೇ ಕೇಳಿದೆ.

— ಅಹುದು. ಅಂದರೇನಾಯಿತು. ನಿಮಗೇಕೆ ಅಷ್ಟು ಕೋಪ ಬಂತು?

-- ಮತ್ತೇನು? ಆ ಅವಸ್ಥೆ ಅನುಭವಿಸಿದವರಿಗೇ ತಿಳಿಯುವುದು ಕಾಂತಂ.

— ಈಗ ತಿಳಿಯಿತಲ್ಲವೆ ?

— ಕಾಂತಂ. ನಿನಗೆ ಪೆಟ್ಟು ತಾಕಿತೇ ?

-- ಆ ಇಲ್ಲ. ಏಟು ಬಿದ್ದರೆ ನಿಮಗೆ ಇಲ್ಲಿ ಯಾರು ಈ ವೀಳೆದೆಲೆಯನ್ನು ಕೊಡುತ್ತಿದ್ದರು ?........

ಹೀಗೆ ಈ ನಮ್ಮ ಪ್ರೇಮ ಸಂಗ್ರಾಮದಲ್ಲಿ ತಾನೇ ವಿಜಯಶಾಲಿಯಾದೆನೆಂಬ ಗರ್ವದಿಂದ ಓರೆಗಣ್ಣಿನಿಂದ ನೋಡುತ್ತ ಕಾಂತಂ ತುಸು ನಕ್ಕಳು. ವೀಳ್ಯೆಯನ್ನು ಕೊಡುತ್ತಿದ್ದ ಆ ಮೃದು ಕೈಗಳನ್ನು ಕೊಂಚ ನಯವಾಗಿ ಹಿಸುಕಿದೆ. ಕೋಮಲೆಯಾದ ಕಾಂತಂ ಮುಖ ಕೆಂಪಾಗಿ 'ಅಬ್ಬ' ಎಂದಳು. ಕಾಂತಂಳ ಹಾಸ್ಯ ವರ್ತನೆಯ ನಾಟಕದ ಅರಿವು ಅಂದು ನನಗಾದುದು ನನ್ನ ಜೀವನದ ಮಹತ್ವದ ಅನುಭವವೆಂದು ಬೇರೆ ಹೇಳಬೇಕಾಗಿಲ್ಲ.



ಇವೆತ್ ಕಾದಂಬರಿಯ ಕಥಾವಸ್ತು ಮತ್ತು ಕತೆಯ ತಿರುಳು ಹೃದಯಕ್ಕೆ ನಾಟುವಂಥದು.

—ನವಯುಗ

ಸಮಾಜ ಸುಧಾರಕರೂ ಎಲ್ಲ ನಾಗರಿಕರೂ ಓದಲೇಬೇಕಾದ ಕಾದಂಬರಿ.

—ವಿಶಾಲ ಕರ್ನಾಟಕ

**ಸೈಮನ್ನನ ತಂದೆ** : ( ಮೋಪಾಸಾನ ಮತ್ತು ಇತರ ಕತೆಗಳು )

ವಿವಿಧ ಲೇಖಕರು ಬೆಲೆ ೨-೮-೦

ಈ ಕೃತಿಯು ಕನ್ನಡ ಅನುವಾದ ಸಾಹಿತ್ಯಕ್ಕೆ ಒಂದು ಪ್ರಮುಖ ಕಾಣಿಕೆ.

—ಚಿತ್ರಗುಪ್ತ

ಈ ಸಂಗ್ರಹದ ಕತೆಗಳು ತುಂಬಾ ಕಲಾಪೂರ್ಣವಾಗಿವೆ.

—ಕಲಿಯುಗ

**ಪೂರ್ಣಿಮಾ** : ( ಸಂಸಾರ ಚಿತ್ರಗಳು-ಪತ್ರರೂಪದಲ್ಲಿ )

ಶ್ರೀ ತಿ. ಶಿದ್ದಪ್ಪ ಸ. ಸಂಪಾದಕರು ನವಯುಗ, ಬೆಲೆ ಸಾ. ೧-೪-೦
ಉ. ೨-೪-೦

ವಿಚಾರ-ವಿಮರ್ಶೆಗಳಿಂದ ಕೂಡಿದ ಪ್ರಣಯಪತ್ರಗಳು ವಿರಳ. ಈ ದೃಷ್ಟಿಯಿಂದ ಈ ಕೃತಿಯು ಬೆಲೆ ಅಮೂಲ್ಯ.

—ಕಥಾವಳಿ

ಇದರ ಭಾಷೆ ಮತ್ತು ಪತ್ರಗಳು ಸುಂದರವಾಗಿರುವವು. ಪತ್ರದ್ವಾರ ಕತೆ ಹೇಳುವ ಈ ಪುಸ್ತಕ ಕನ್ನಡಕ್ಕೆ ಒಳ್ಳೇ ಕಾಣಿಕೆ.

—ವಿಶಾಲ ಕರ್ನಾಟಕ

ಪೂರ್ಣಿಮಾ ದಂಪತಿಗಳ ನಿತ್ಯ ನೂತನ ಪ್ರೇಮದ ಚಿತ್ರಣ.

—ಚಿತ್ರಗುಪ್ತ

ವರ್ಷಕ್ಕೆ ನಾಲ್ಕು ಸುಂದರ ಪ್ರತಿಗಳಿಗೆ ವಾರ್ಷಿಕ ಚಂದಾ :—

**ಉತ್ತಮ ಪ್ರತಿ : ರೂ. ೬–೮–೦ ಸಾದಾ ಪ್ರತಿ : ರೂ. ೫–೮–೦**

# ಆನಂದ ಗ್ರಂಥಮಾಲೆಯಲ್ಲಿ ಈಗ ದೊರೆಯುವ ಪುಸ್ತಕಗಳ ಬಗ್ಗೆ ಅಭಿಪ್ರಾಯಗಳು

★

**ಪುಷ್ಪಹಾರ** : ( ಸಾಮಾಜಿಕ ಕಾದಂಬರಿ )

ಶ್ರೀಮತಿ ಶ್ರೀ ಜಯಲಕ್ಷ್ಮೀ ಶ್ರೀನಿವಾಸನ್ ಬೆಲೆ ೧-೪-೦

ಈ ಕಾದಂಬರಿಯ ಸನ್ನಿವೇಶ, ಏರಿಳಿತಗಳು ಓದುಗನಿಗೆ ಆನಂದ ವನ್ನುಂಟುಮಾಡುತ್ತವೆ.

—ನವಯುಗ

**ಮನೋರಾಜ್ಯ** : ( ಮೂರಂಕದ ನಾಟಕ )

ಶ್ರೀ ರಂ. ಶ್ರೀ. ಮುಗಳಿ ಬೆಲೆ ೧-೧೨-೦

ಪ್ರಸಿದ್ಧ ಸಾಹಿತಿಗಳಾದ ಪ್ರೊ. ಮುಗಳಿಯವರ ಈ ಪುಸ್ತಕ, ಎಲ್ಲ ರಿಂದಲೂ ಸಂಗ್ರಹಯೋಗ್ಯವಾದ ಮೇಲುದರ್ಜೆಯ ನಾಟಕ.

—ಉಷಾ

ಈ ನಾಟಕ, ಕುಸಿದು ಬೀಳುತ್ತಿರುವ ಕರ್ನಾಟಕದ ಇನಾಮದಾರಿ ಮನೆತನದ ಚಿತ್ರ.

—ಕರ್ಮವೀರ

ಮನೋರಾಜ್ಯ ನಾಟಕವು ಮನೋಹರವೇ ಆಗಿದೆ.

—ಜೈಹಿಂದ

**ಇವೆತ್** : ( ಮೋಪಾಸಾನ ಕಾದಂಬರಿ )

ಶ್ರೀ ಪಂ. ವೆಂಕೋಬಾಚಾರ್ಯ ಬೆಲೆ ೧-೧೨-೦

ಹೆಣ್ಣಿನ ಕಣ್ಣೀರ ಬಾಳನ್ನು ತೋರಿಸಿ ಓದುಗರ ಸಹಾನುಭೂತಿಯನ್ನು ಗಳಿಸುವ ಈ ಕಾದಂಬರಿಯು ಫ್ರೆಂಚ್ ಬಂಡವಳಶಾಹಿ ಸಮಾಜದ ನೀತಿ ಧರ್ಮಗಳನ್ನು ಬಯಲಿಗೆಳೆದಿದೆ.

—ಚಿತ್ರಗುಪ್ತ

ಈ ಕಾದಂಬರಿಯಲ್ಲಿ ಒಳ್ಳೇ ಹೃದಯಂಗಮವಾದ ಸನ್ನಿವೇಶವಿದೆ.

—ಕರ್ಮವೀರ